ಗೋಚರಪಡಿಸುವಮತಿಯಿಲ್ಲ ॥ ೨ ॥ ದೇಹದಿಬಲವಿಲ್ಲವಾದುರೂ-ವ
ಬಿಡದಲ್ಪವಾದರೂ ॥ ಗೇಹದಿಸುಖವಿಲ್ಲದಿದ್ದರು-ಈ ಸೋಹಮೆಂಬುದ
॥ ೩ ॥ ದಾಸರಸಂಗದೊಳಾಡಿಸು-ಹರಿ-ವಾಸರವ್ರತದೊಳು ಕೂಡಿ
ದೇವನೆನಿನ್ನ ಪಾಡಿಸು-ಸಿರಿ ವಾಸನಾಮುದಸವಿ ಯೂಡಿಸು ॥ ೪ ॥
ಹುದಾದಗೆ-ಘನ-ಕರುಣಾರಸನಿನಗುಳ್ಳರೆ । ಕರುಣೆಸುಪುಲಿಗಿರಿ ವಾಸ
ದವಿಠಲನೀನೆ ನಮ್ಮದೊರೆ ॥ ೫ ॥

## 48. ರಾಗ—ಕೇತಾರಗೌಳ.

ಕೊಡುಕೊಡುವರವನು, ತಡವುಮಾಡದೆ ಯೆನ್ನೊಡೆಯ ಶ್ರೀ
ಮಾಡಯ್ಯ ॥ ಪ ॥ ಬಿಡದಿರೆನ್ನನು ಜಗ ದೊಡತಿಯಾಣೆನಿನ್ನಡಿಗಳನೆ
ನಯ್ಯ ॥ ಅ ॥ ಕ್ಷಿತಿಯೊಳಗತಿಶಯ ಪತಿತಪಾವನಶ್ರೀ-ಪತಿನೀಗತಿಯೆನು
ರತಿಪತಿ ಪಿತನೆಸು ಮತಿಯನು ಪಾಲಿಸಿ । ಗತಿಯನು ತೋರಪುದೆನಗಯ
ನಿನ್ನಪದವನಂಬಿ-ನಿನ್ನವನೆನಿಸಿದ-ಯನ್ನನುಪೇಕ್ಷಿಪರೇನಯ್ಯ ॥ ಸನ್ನು
ಮನ್ನಿಸಿ ಕೇಳುವ । ಬಿನ್ನಪವಿನಿತೆ ಕೇಳಯ್ಯ ॥ ೨ ॥ ಎಲ್ಲರ ಹೃದಯದ
ಸಿರುವ । ಫುಲ್ಲನಯನನೀ ಪೇಳಯ್ಯ ॥ ಕಲ್ಲುಮನದಿನೀ ನೊಲ್ಲದೊಡೀ
ಪೋಪುದಿನ್ನೆಲ್ಲಯ್ಯ ॥ ಪತಿಯಗಲಿದ ಪತಿವ್ರತೆಗೆ ಇತರರಲಿ ರತಿ ಸಂ
ಸಯ್ಯ । ಗತಿಪತಿಯೆಲ್ಲರ ಪತಿನೀನೆನ್ನುತ । ಶ್ರುತಿನುತಿಪುದು ಪುಶಿಯೇನಯ
ಜಗದೊಳು ನಿನ್ನನೆ ಸುಗುಣಿಯುಯೆನ್ನುತ । ನಿಗಮವು ಪೊಗಳುತಲಿಹ
ಖಗಪತಿಗಮನನೆ ಬಗೆಬಗೆಯಲಿ ರತಿ । ಸೊಗಯಿಸು ನಿನ್ನೊಳು ಯನಗಯ
ಸೃಷ್ಟಿನಾಥಪದ ವಿಷ್ಟರ ಭಕ್ತಿಯ । ಕೊಟ್ಟರಭೀಷ್ಟವು ಯನಗಯ್ಯ ॥
ಲಿನ್ನು ಲಕ್ಷಕೊಟ್ಟರೂಯನ ಗಿಷ್ಟವಿಲ್ಲಶ್ರೀ ಕೃಷ್ಣಯ್ಯ ॥ ೬ ॥ ಚರಣ
ಳಗೆರಗುವೆ ಪುಲಿಗಿರಿ ವರದವಿಠಲ ದಯೆಯಿರಿಸಯ್ಯ ॥ ಚರಣಶರಣನಿಗ
ದಿರ್ದರೆ ಕರುಣಿಗಳರಸರಿನ್ನಾರಯ್ಯ ॥ ೭ ॥

## 49 ರಾಗ—ಶ್ರೀರಾಗ.

ಇದನಾದರು ಕೊಡದಿದ್ದರೆ ನಿನ್ನ-ಪದದ ಸೇವೆಗೆ ಜನರೊದಗುವ
ದೊರೆತನವಾಗಬೇಕೆನಲಿಲ್ಲ-ಬಲು, ಸಿರಿತನವನು ವಾಂಛಿಸಲಿಲ್ಲ ॥ ಪರಿಪ
ಸ್ಪೃಹೆಯನಗಿಲ್ಲ-ನಿನ್ನ-ಸ್ಮರಣೆಯೊಂದಿತ್ತರೆ ಸಾಕಲ್ಲ ॥೧॥ ಅನ್ನವಸ್ತ್ರವಕೆ

್ಯ-ಚಿನ್ನ ಬಣ್ಣವಕೊಡು ಎನಲಿಲ್ಲ || ಹೆಣ್ಣುಮಣ್ಣಿನೊಳಾಸೆ ಯನಗಿಲ್ಲ-ಹರಿ-ರ್ಣಸೇನೊಲಿದರೆ ಸಾಕಲ್ಲ || ೨ || ಸುರರ ಭೋಗದಿ ಮನವೆನಗಿಲ್ಲ-ಪುಲಿ-ಗಿರಿ ರೆಬಲ್ಲೆ ನೀನಿದನೆಲ್ಲ || ೩ ||

## 50 ರಾಗ—ಕಾಪಿ.

ಕ್ಷಮಿಸೆನ್ನ ದೋಷಗಳ-ಕ್ಷಿಪ್ರದಿ ಹರಿ || ಪ || ಕ್ಷಮೆಯನ್ನು ಧರಿಸಿದ, ರುಲಾನಿವಾಸನೆ || ಅ || ಕರಣತ್ರಯದಿಕಾಲ-ಹರಣವಿಲ್ಲದೆ ಪಾಪಾ| ಚರಣೆಯಿಂ ೀಷದ ಭರಣೆಯಾದೆನು ಹರಿ || ೧ || ಮಾಡಬಾರದಪಾಪ ಮಾಡುವೆನನುದಿನ|| ೂಢನ ಸುಕೃತವ ನಾಡಿತೋರಿಸಲೇಕೆ || ೨ || ಹರಿಗುರುಹಿರಿಯರ-ಜರಿದು ಸಜ್ಜ ನು | ತೊರೆದು ದುರ್ಜನರೊಳು ಬೆರೆದು ಪಾಮರನಾದೆ || ೩ || ಸರ್ವಂಸಹಾಧಿಪ ರ್ವಚೇತನದೀಪ | ಸರ್ವಾಪರಾಧವ ನಿರ್ವಹಿಸುವ ಭೂಪ || ೪ || ದುರಿತವೈರಿಯೆ ್ನ-ಮರೆಹೊಕ್ಕ ಮನುಜಗೆ | ದುರಿತದುಃಖಗಳುಂಟೆ-ವರದವಿಠಲರಾಯ || ೫ ||

## 51. ರಾಗ—ಯಮುನಾಕಲ್ಯಾಣಿ.

ಮನೆಗೆ ಬಾರೋ ರಂಗ-ಮನಸಿಜನಯ್ಯನೆ | ಕಣ್ಣಿನೊಳಗೂನಿನ್ನ ನೆನಹು ಡದುಯನ್ನ || ಪ || ಮನೆಗೆ ಬಾರೋ ರಂಗ-ಮನೆಗೆ ಬಾರೋ ಕೃಷ್ಣ | ಮನೆಗೆ ಾರೋ ರಾಮ || ಅ || ಮನೆಗೆ ಬಂದರೆನಿನ್ನ ಮಹಿಮೆಯ ಪಾಡುತ | ಮನದಣಿ ಂದದಿ ಕುಣಿದೇನೊ ರಂಗಯ್ಯ || ೧ || ಮನೆಯುನಿನ್ನದುಯನ್ನ-ತನುವುನಿನ್ನುದ ುನ್ನ ಧನವು ನಿನ್ನದುಯನ್ನ ಘನವು ನಿನ್ನದು ರನ್ನ || ೨ || ದರಹಸಿತಾನನ-ಸರ ಜನಯನ | ವರದವಿಠಲಪುಲಿ ಗಿರಿವರಸದನ || ೨ ||

## 52. ರಾಗ—ಸೌರಾಷ್ಟ್ರ —ಆದಿತಾಳ.

ವೆಂಕಟಾಚಲವಾಸ-ಪಂಕಜಪ್ರಿಯಭಾಸ || ಶಂಕರಾರ್ಚಿತಚರಣ ಪಂಕಜಾ ಸಹಿತ | ಪಂಕಜಲೋಚನ-ಕಿಂಕರಜನಶರಣ || ಪ || ಪರಮಾತ್ಮನಿನ್ನ ಶ್ರೀ ಪದಸೇ ಕನಾಗಿ | ಪರರನುಸರಿಸುವನೆ || ಸಿರಿರಮಣನೆನಿನ್ನ ಕರುಣೆಯುಳ್ಳವಪರ ಸಿರಿಯ ಯಸುವನೆ || ೧ || ಧರಣೀಯನಾಳುವ ಧೊರೆಯ ಕುಮಾರನು ತಿರಿಕೆಯ ಬೇಡು ನೆ || ಸುರತರುವಿನತಂಪು ನೆರಳೊಳು ಕುಳಿತ್ತುತಾ | ಗರಿಕೆಯನರಸುವನೆ || ೨ || ಾರನಿಗಮವಿಚಾರವುಳ್ಳವ ನಿಸ್ಸಾರದಿ ಬೆರೆಯುವನೆ | ವಾರಿಧಿಲಂಘಿಪ ಧೀರನು ೂಳಚೆಯ ನೀರಿಗೆ ಜರಿಯುವನೆ || ೩ || ಕ್ಷೀರಾಬ್ಧಿಮಥಿಸಿದ ಶೂರನಿನ್ನವನಿಗೆ

ನೀರುಮಜ್ಜಿಗೆ ಗಣನೆ || ನಾರಸಿಂಹಸಪದ ಸಾರಿದವನು ಮದ ವಾರ
|| ೪ || ಗರುಡಗಮನನಿನ್ನ ಶರಣನಾದವನಿಗೆ ತರಳನಹಾವಳಿಯೆ || ನರ
ಸ್ಮರಿಸುವನರನಿಗೆ | ದುರಿತಂಗಳಟ್ಟುಳಿಯೆ || ೫ || ಹೊಳೆಯೊಳು ನೆನೆ
ಗಟ್ಟಿ ಕಲ್ಲುತಾ-ಮಳೆಯೊಳು ನೆನೆಯುವದೆ | ಇಳೆಯೊಳು ಪುಲಿಗಿ
ದಾಸರ ಬಲುಹುಕುಂದಕವಹುದೆ || ೬ || ಇಷ್ಟದಿ ಮನೆಯೊಳು ವ್ಯ
ಡವ | ಪಿಷ್ಟವ ಬಯಸುವನೆ || ಸೃಷ್ಟೀಶನಿನ್ನೊಳಗಿಟ್ಟುದುರ್ದೈವದ
ಸುವನೆ || ೭ || ನಿಗಮಗೋಚರಕೇಳು| ಜಗವತೂಗುವನಿಗೆ-ಮಗುವತಿಫ
ಜಗದಘಹರಣಯನ್ನಘವನೀಗಲು ನಿನ್ನ ಬಗೆಗೆ ದುರ್ಘಟವಹುದೆ ||
ಮಾತ್ಮ ಪರಿಪೂರ್ಣ ಪರವಸ್ತು ನೀನೆಂದು ಮರೆಹೊಕ್ಕೆಕಾಯೊಯನ್ನ ||
ಣಾಕರ ವರದ ವಿಠಲಪುಲಿ ಗಿರಿದೊರೆಸುಪ್ರಸನ್ನಾ || ೯ ||

## 53. ರಾಗಾ—ಸಾವೇರಿ—ಆದಿತಾಳ.

ಶ್ರೀನಿವಾಸ ತವಚರಣ ಸರೋರುಹ-ಮಾನತೋಸ್ಮಿ ಸತತಂ || ಸ
ಮನಸಾವಚನಾ ಶಿರಸಾನುಕೂಲಪಲದಂ ಶುಭಚರಿತಂ|| ವಾಸವಸನ್ನುತ
ಶಯನ ಶ್ರೀಶವಾಸಹಿರಣ್ಮಯವಾಸಸಮುಸ್ತಾವಾಸ ತರಣಿಶತಭಾಸಸುಮನ
ವಿಜಿತರೋಷ | ವಾಸರೇಶ ಶತ ಭಾಸುರ ಭೂಷಣ ಭೂಷಿತಾಂಗವಿಶೇ
ಮೃದು ಭಾಷಣ || ಸಜ್ಜನಪೋಷಣ ನಿರ್ಜಿತ ದೂಷಣ ಭವಜಲಶೋಷಣ
|| ೧ || ಪುಂಡರೀಕಾಸನ ಖಂಡಪರಶು ಆ ಖಂಡಲ ಮುಖಸುರಮಂ
ಚಂಡನಿಶಾಚರ ಮಂಡಲ ಖಂಡನ ಪಂಡಿತರಣ ಶೌಂಡ | ಪುಂಡರೀಕ
ಡಜವಾಹನ | ಖಂಡಿತಕೇಶ ಕೋದಂಡಕೃತಾರ್ಜನ ಪುಂಡರೀಕಗಿರಿ
ಹಿಮಕರಮಂಡಲ ಸನ್ನಿಭಕುಂಡಲಾಭರಣ || ೨ || ವಾರಿದನೀಲಶರೀರ ಧರ
ಸುಮಂದರಧಾರಣ ಚತುರುಕರಾಗ್ರವಿ ದಾರಿತ ಶೂರಹಿರಣ್ಯಾಕವೀರನರ ಮೃ
ವಾರಿಜನಿಲಯಾವರ ಕರುಣಾಕರ, ಮಾರಜನಕ ಸುರವಾರವಂದ್ಯಪದ ಸಾ
ಹರಿ ಜಲಧಿ ಗಂಭೀರ ವ್ಯಾಘ್ರಗಿರಿವರದ ವಿಠಲಹರಿ || ೩ ||

## 54. ರಾಗಾ—ಶಹನಾ.

ಬಾರೋಮನೆಗೆ ಶ್ರೀದಾರನೆ ನಿಜಪರಿವಾರದೊಡನೆ ಗುಣವಾರಿಧಿಯೆ || ಪ ||
ಮಾರಜನಕಸುಕುಮಾರಾಂಗ ಪರಮೋದಾರಾಕೃತಿಯನೀ ತೋರಿಸೆನಗೆ || ೧ ||
ಎಷ್ಟು ಜನ್ಮದ ತಪವ್ರೊಟ್ಟಾಗಿ ಸೇರಲು ದೃಷ್ಟಿಸುವೆನೊ ಶ್ರೀಕೃಷ್ಣ ನಿನ್ನನು || ೨ ||
ಚಿನ್ನದ ಪೀಠದಿ ರನ್ನದ ಕಲಶದಿ| ಚನ್ನಾಗಿ ತೊಳೆಯುವೆ ನಿನ್ನಡಿಗಳ || ೩ ||
ಗಂಧವ ಹಚ್ಚಿ ಸುಗಂಧ ತುಳಸೀ ದಳ | ದಿಂದಾಲಂಕರಿಸುವೆ ಸುಂದರಾಂಗನೆ|| ೪ ||
ಜಾಜಿಯು ಮೊದಲಾದ ಹೂಜಾತಿಗಳ ತಂದು | ಮೂಜಗದೊಡೆಯನನು ಪೂಜಿಸುವೆನೊ || ೫ || ಲೋಪವಿಲ್ಲದೆ ದಿವ್ಯ ಧೂಪವನರ್ಪಿಸಿ | ದೀಪಂಗಳನು ಬಹು ದೀಪಿಸುವೆನು ||೬||ಪಾಲುಸಕ್ಕರೆ ಘೃತ|ಮೇಲಾದ ಭೋಜ್ಯವ|ಮೇಳೈಸುವೆನು ಶ್ರೀಲೋಲನಿಗೆ || ೭ || ಕರ್ಪೂರ ವೀಳ್ಯವನರ್ಪಿಸಿ ಮೋದದಿ | ಕರ್ಪೂರದಾರತಿಗಳರ್ಪಿಸುವೆನು || ೮ || ಮಣಿದು ನಿನ್ನಂಘ್ರಿಗೆ ಹಣೆಯ ಚಾಚುತಮನ ದಣಿಯುವಂದದಿ ನಾಕುಣಿದಾಡುವೆ || ೯ || ಸದಯ ನಿನ್ನಂಘ್ರಿಯ ಹೃದಯಾರವಿಂದದ | ಸದನದೊಳಿಂಬಿಟ್ಟು ಮುದವೊಂದುವೆ|| ೧೦ || ಶರಣಾಗತರನ್ನೆಲ್ಲ ಕರುಣದಿ ಸಲಹುವ | ವರದ ವಿಠಲ ಪುಲಿ- ಗಿರಿಧಾಮನೆ || ೧೧ ||

## 55. ರಾಗಾ—ಪೂರ್ವಿ.

ಫಾಲ ನಯನ ನುತ ಪಾಲಿಸು ಸತತ | ಪಾಲಿತಸುರನರ ಜಾಲಸುಚರಿತ || ಪ ||
ಲೀಲಾ ನಟನ ಫಣಿಶೈಲನಿಳಯ ಭಕ್ತ | ಪಾಲವಿದೈತವನ ಮಾಲಶ್ರೀಲೋಲ ||೧||
ಬಾಲತನದಿ ನಿಜ ಲೀಲಾ ಚರಿತಗುಣ | ಜಾಲವಿಮೋಹಿತ ಬಾಲಾನುಕೂಲ ||೨ ||
ಧಾರಾಧರಾಭ ಶರೀರ ತಿರಸ್ಕೃತಮಾರ ವಿಹಗಸಂ ಚಾರವುದಾರ ||೩|| ಘೋರದನುಜ ಸಂಹಾರಸುಜನಪರಿವಾರ ನಿಗಮ ವಿಚಾರ ವಿಹಾರ || ೪ || ಕರುಣಾವರಣ ನಿಜ ಶರಣಾ ಭರಣ ಭಯ ಹರಣ ಸಕಲ ಸುಖಕರಣ ಶ್ರೀರಮಣ ||೫|| ಶೇಷಶಯನ ಕಲಿ ದೋಷದಮನ ಮೃದು | ಭಾಷ ಮನೋಹರ ಭೂಷಸುವೇಷ || ೬ ||
ಹರಿದಾಸರನು ಬಲು | ಹಿರಿದಾಗಿ ಪೇರೆಸುವ | ದ್ವಿರದವರದ ಶ್ರೀ ವರದವಿಠಲ||೭||

## 56. ರಾಗಾ—ದೇಶೀಯ.

ಶ್ರೀನಿವಾಸ ಪದ ಧ್ಯಾನಕರೋರೆ| ಸಾನುರಾಗ ಯುತಮಾನಸಮೇರೆ ||ಪ||
ಮದಪರಿಪೂರಿತ ಹೃದಯಸುನೋರೆ | ಸದಯ ಹೃದಯ ಪರಿಪದ ಮಿಳನಾರೆ || ೧ ||
ಕಾಮಕ್ರೋಧವುಪರಾಮ ಕರೋರೆ | ರಾಮನಾಮ ಜಪಕಾಮು ಕರೋರೆ|| ೨ ||

ದೇಹಗೇಹಧನ ಮೋಹನಲೇರೆ | ಶ್ರೀಹರಿ ಸ್ಮರಣ ಕಾಂಹಿ ಚಲೇರೆ || ೩
ಮಿತ್ರ ಬಹು ಶತ್ರುಕುಮಾರೆ-ವೃತ್ರ ವೈರೀಸುತ ಮಿತ್ರನಗಾರೆ || ೪ || ಭ
ಜನಸಂಗ ನಕೋರೆ | ಮಂಗಳಾಂಗ ನರಸಿಂಹ ಭಜೋರೆ || ೫ || ಸೂಕ್ಷ
ನಿರಪೇಕ್ಷ ಭಲಾರೆ | ಮೋಕ್ಷದಾತ ಕಮಲಾಕ್ಷಕು ಲಾರೆ || ೬ || ದಾ
ಸಹವಾಸ ಕರೋರೆ | ವಾಸುದೇವ ನಿಜ ದಾಸಕು ಹೋರೆ || ೭ || ಶ್ರೀಪು
ಭೂಪಮುರಾರೆ - ಶ್ರೀಪತಿಘನ ಚಿದ್ರೂಪಕಹೋರೆ || ೮ || ಪರಮ ಪುರ
ಹರಿ ಕರುಣೀರೆ-ವರದ ವಿಠಲ ಕರಿವರ ಧಣೀರೆ || ೯ ||

## 57. ರಾಗಾ—ಶುದ್ಧಸಾವೇರಿ.

ಹಣ್ಣು ಬಂದಿದೆ-ಜನರು-ಹಣ್ಣು ಕೊಳ್ಳಿರೋ|ಗಣ್ಯವಾಗಿ ಬಣ್ಣಿಸುತ್ತ
ವಂತರುಣ್ಣುತಿರುವ || ಪ || ಬೀಜವಿಲ್ಲದಾ- ಬೆಳೆದ ಭೂಜವಲ್ಲದ ಬೀಜ ಭೂ
ತಾನೇ ಬೀಜವಾಗಿ ಮೆರೆಯುತಿರುವ || ೧ || ಹುಟ್ಟಿಬೆಳೆಯದಾ - ಜನರು-
ತೊಳೆಯದಾ | ಎಷ್ಟುದಿವಸ ವಿಟ್ಟಿರಲು ಕೊಳೆತು ಕೆಟ್ಟು ಹೋಗದ || ೨ ||
ಬಾರದಾ - ತನ್ನ-ನೆಲೆಯತೋರದ || ಒಲಿದವರಿಗೆ ಸುಲಭವಾಗಿ | ಹಲವು
ಹೊಳೆಯುತಿರುವ || ೩ || ಅರಿಯದವರಿಗೆ-ರುಚಿಯ-ನರಿತಜನರಿಗೆ || ಅರಿತ
ನಿರುತ ವಿರುತ | ಸರಸಮಧುರ ಭರಿತ ಬರಿತ || ೪ || ಸಿರಿಮನೋಹರ-ವಾ
ಗಿರಿಯ ಮಂದಿರ || ಶರಣ ಜನರ ಪೊರೆವ ನಮ್ಮ | ವರದವಿಠಲ ನೆಂಬದಿವ್ಯ |

## 58. ರಾಗಾ—ದೇಶೀಯ.

ಚಿಂತಿಸು ಮನವೆ ಶ್ರೀಹರಿಯ-ನಿಶ್ಚಿಂತೆ ಯೊಳಗೆ ಪುಲಿ ಗಿರಿಧೊರೆಯ |
ಶ್ರೀರಮಣೀ ನಿಜವಲ್ಲಭನ-ವಾರ ಚತುರ್ಮುಖರಿಗೆ ಪಿತನ || ನಾರದ ಶವ
ಮಹನ-ಮದ-ವಾರಣಮುಖ ಪ್ರಪಿತಾಮಹನ || ೧ || ಉರದಲ್ಲಿ ಸಿರಿ
ಧರಿಸಿಹನ-ನಿಜ-ಶಿರದಿ ಕಿರೀಟವ ನಿರಿಸಿಹನ || ಕರದಲ್ಲಿ ಚಕ್ರವಪಿಡಿದಿಹನಾ -
ಕರುಣದಿ ಭಕ್ತರಿಗೊಲಿದಿಹನ || ೨ || ನೀಲ ಜಲದಸಮ ವಿಗ್ರಹನ ವನಮ
ಕೊರಳೊಳು ಪೊತ್ತಿಹನ || ಬಾಲಕ ಸುಕೃತಾನು ಗ್ರಹನ-ನಿಜ ಲೀಲೆ ಯೊ
ನಿಗ್ರಹನ || ೩ || ಅಂಗಜನಿಭ ಸುಂದರನ-ಸುರ- ಗಂಗೆಯ ಪಡೆದ ಪಾದಾಂ
ತುಂಗ ವಿಹಂಗತು ರಂಗಮನ-ಶುಭ-ಮಂಗಳ ಗುಣಗಣಸಂಗತನ || ೪ ||
ಸನ್ನಿಭ ಲೋಚನನ-ನಿಜ ಶರಣರ ಭವಭಯ ಮೋಚನನ || ವರವ್ಯಾಘ್ರಾಚ
ಯಕನ -ನಮ್ಮ-ವರದವಿಠಲ ವರದಾಯಕನ|| ೫ ||

## 59. ರಾಗಾ—ಜಾವಡಿ.

ತಿರಲಾರೇ -ಮನಸಾರೇ ಹರೇ || ಪ || ಮರೆತಿರಲಾರೆನಾಮಹಿತಚಾರಿತ್ರನ | ಜ ಪತ್ರನೇತ್ರನ || ಅ || ಬಗೆಬಗೆರತಿಯಲ್ಲಿ ಜಗವನುಮೋಹಿಪ | ಸುಗುಣನ ಪ್ರಾಣನ || ೧ || ಚೇತನರಿಗೆ ಸುಖದಾ ತನ ದುಃಖ ವಿಘಾತನ ಲಕ್ಷ್ಮೀನಾ || ೨ || ದಾಸರಹೃದಯ ನಿವಾಸನ - ದೋಷನಿರಾಸನ ಶ್ರೀನಿವಾಸನ || ೩ || ಟರಮಣನ -ಕಿಂಕರಶರಣನ ಸಂಕಟಹರ ನಿಷ್ಕಳಂಕನ ||೪|| ಮಾನಿನಿಯಅಭಿ ನವಕಾಯ್ದನ | ದೀನರ ಹರ್ಷನಿಧಾನನ || ೫ || ರಾಮನ ದೈತ್ಯವಿರಾಮನ ಸನ -ನಾಮನ ಹೃದಯಾರಾಮನ || ೬ || ಧರೆಯೊಳುತ್ತಮ ಪುಲಿ ಗಿರಿಯೊಳು ಹ | ವರದ ವಿಠಲವರದನ ದೇವನ || ೭ ||

## 60 .ರಾಗಾ—ರಾಗಾ—ಸುರುಟಿ—ಆದಿ.

ಸಲಹೊ ಶ್ರೀನಿವಾಸ-ಸದ್ಗುಣ - ನಿಲಯವೆಂಕಟೇಶ | ಒಲಿದುಸಕಲಗೋಕು ನುಸಲಹಿದ ಜಲಜಾಂಬಕ ನೀನಲಸದೆ ಯೆನ್ನನು ||ಪ|| ವಾತವುಮಿತಿಮೀರಿ- ವ್ರಾತದೊಡನೆ ಸೇರಿ | ಧಾತುಗಳೆಲ್ಲವಿಘಾತಿಸಿ ಕಫಸಂಘಾತವು ಹೆಚ್ಚಿದ ವನೋಡಿ ||೧|| ಶ್ವಾಸನಿರೋಧದಲಿ ಸೇರಿದ-ಕಾಸಗಳುದರದಲಿ| ಕೇಶರಂಧ್ರದ ಶದೊಳೂರ್ಧ್ವಶ್ವಾಸ ಹೆಚ್ಚಿ ಬಲುಘಾಸಿಪಡಿಸುತಿದೆ ||೨|| ಕಾಯದಬಲ ಲ್ಲ-ಕದಲುತ-ವಾಯುವಾದವಲ್ಲ || ದಾಯತಪ್ಪಿ ದುರ್ವಾಯುವಿಂದ ತಲೆ! ಯುತ ದೇಹದೊಳಾಯಸ ಹೆಚ್ಚಿತು ||೩|| ನಿದ್ರೆಬಾರದಯ್ಯಾ-ನಿಶಿಯೊಳ- ರಬೇಕಯ್ಯಾ | ಮದ್ದುತಿಂದವನ ಬುದ್ಧಿಯಂತೆ ಮೈ | ಗುದ್ದಿಕೊಂಡು ದ್ದಾಡಿಸುತಿದೆ ||೪|| ಅನ್ನವರೋಚಕವು | ಆಪ್ತರೊಳನ್ಯತೆಗೋಚರವು | ನ್ನವೈದ್ಯರುಗಳನ್ನು ಕಾಣೆ ನೀ ಕಣ್ಣುತೆರೆದು ನೋಡೆನ್ನ ಕಟಾಕ್ಷದಿ ||೫|| ೀಗವು ಘನವಯ್ಯಾ-ರೋದನೆ-ಯಾಗಿಹುದೆನಗಯ್ಯಾ | ನೀಗಲಾಡು ಈ ರೋಗ ನ್ನ ಭವ-ರೋಗವೈದ್ಯ ನೀನೇ ಗತಿಯೆಂದಿಗು ||೬|| ಪರಮಪುರುಷ ನಿನ್ನ-ಚರ ರ ಮರೆಹೊಕ್ಕಿಹೆ ಮುನ್ನ | ಶರಣಾಭರಣ ಪುಲಗಿರಿಯೊಳು ನೆಲಸಿಹ | ವರದ ಲ ಧೊರೆ ವರದದಯಾನಿಧೆ ||೭||

## 61. ರಾಗ—ಜುಂಜೋಟಿ—ಅಟ್ಟತಾಳ.

ಶ್ರೀವಾಸಾನತಮಾಕಲಯಾಚ್ಯುತ| ಶ್ರೀವಾಸುಕಿಶಯಮಾಮನಿಶಂಹೃದಾ|| || ಪುಂಡರೀಕನಯನಾಂಡಜವಾಹನ-ಕುಂಡಲಶಯಮಾಂಡವ್ಯಸೇವ್ಯಪದ ||೧||

ಪುಂಡರೀಕಸುಮಂಡಿತಾಂಗಪದಪುಂಡರೀಕ ಶ್ರಿತಪಾಂಡುತನಯಭೋ |
ನಂದಗೋಪವರ ನಂದನಸುಮನೋ | ನಂದನಮುನಿಜನ-ವಂದಿತಪದಯುಗ |
ಧರ್ಮತನಯ ಸಹಧರ್ಮಚಾರಿಣಿ | ವರ್ಮಪಾಲಸದ್ಧರ್ಮಶೀಲಹರಿ ||
ವ್ಯಾಘ್ರನಾಮ ದೈತ್ಯಾಗ್ರನಿಗ್ರಹಣೋಗ್ರಸೇನ ತನಯಾಗ್ರವಿದಾರಣ ||
ಬಾಲಭಕ್ತಪರಿಪಾಲಹೇಮಮಯಚೇಲವಿಧೃತವನಮಾಲ ನರಹರೆ ||೬||
ಜನಕಸುರವಾರವಂದ್ಯಮಂದಾರಹಾರ ಸುಕುಮಾರಶರೀರ ||೭|| ಮಂಡ
ಪೂರ್ಣೇಂದುವದನಗೋವಿಂದಮುಕುಂದಸನಂದವಂದಿತ ||೮|| ಖಂಡ
ಕೋದಂಡವೇತಂಡಹಸ್ತಭುಜದಂಡರಘೂದ್ವಹ ||೯|| ಅಂಬರೀಷವರದಂಬ
ಸನಾ | ಲಂಬಮಾನಚರಣಾಂಬುಜ ಕೇಶವ ||೧೦|| ಸಾರವಸ್ತುಪರಿಪೂರವಾ
ನಗ | ಪಾರಿಜಾತವರದಾರ್ಯವಿಠಲ ಶ್ರೀ ||೧೧||

## 62. ರಾಗ—ಪಂತುವರಾಳಿ.

ಮುತ್ತುಬಂತಿದೆ-ದಿವ್ಯಮುತ್ತುಕೊಳ್ಳಿರೋ ||ಪ|| ಮುತ್ತುಬಂದಿಹುದೀ
ವೆತ್ತಿಕೊಳ್ಳಿರೆಲ್ಲಬಂದು | ಉತ್ತಮವ್ಯಾಘ್ರಾದ್ರಿಪುರುಷೋತ್ತಮನೆಂಬುವದಿವ್ಯ |
ಲೆಕ್ಕವಿಲ್ಲದಹಣವಿತ್ತರು | ಸಿಕ್ಕದದುರ್ಲಭಮುತ್ತು | ರೊಕ್ಕವಿಲ್ಲದೆ ಭಕ್ತ
ಪುಕ್ಕಟೆಯಲಿ ಸಿಕ್ಕುವಂಥ ||೨|| ಧನವಂತಗೆ ದೊರಕುವದಲ್ಲ-ಜನರಕೈಗೆಸಿಕ್ಕುವ
ಮನದಲ್ಲಿ ಧ್ಯಾನಮಾಳ್ಪಮುನಿಗಳ ಸ್ವಾಧೀನವಾದ ||೩|| ಕ್ಷೀರಪಾರಾವಾರದ
ತೋರಿಮೆರೆವ ಮುತ್ತು | ಶ್ರೀರಮಾಮನೋಹರನುದಾರವರದ ವಿಠಲನೆಂಬ ||

## 63 ರಾಗ—ಧನಾಧರಿ—ಆದಿ.

ಏನಯ್ಯ ಧೊರೆಯೆ-ನಿನ-ಗಾನಂದವೆ ಧೊರೆಯೇ ||ಪ|| ಮಾನಿತಜನ
ಮಾನವನೋಡದೆ | ಹೀನಜನರ ನುಡಿನೀನೊಲಿದಾಲಿಪುದು || ಅ || ಜಾತಿಧ
ವಿಲ್ಲಾ-ಶಾಸ್ತ್ರದರೀತಿನಡತೆಯಿಲ್ಲ | ಮಾತಿದುಪುಸಿಯಲ್ಲಾ-ಮಾನದ-ಭೀತಿ
ಮೊದಲಿಲ್ಲಾ || ನೀತಿಯನರಿಯದ-ಕೋತಿಗಳಂದದ | ಜಾತಿಯುಜನರೊ
ಮಾತಿನವಾಶಿಯಿಲ್ಲ ||೧|| ದುರ್ಜನರು ಬೆರೆದು-ನೋಷುವಿ | ವರ್ಜಿತರನ್ನು ಜ
ಲಜ್ಜೆಯನೆರೆತೊರೆದು-ಗರ್ವದಿ ಗರ್ಜಿಸಿ ಮೊರೆದು || ಈ ಜಗದೊಳಗಿಹ ಸಜ್ಜನ
ಕುಲಕಜ್ಜಳರವಮತಿ ಗುಜ್ಜುಗಿಸುತ್ತಿಹ || ೨ || ಗಂಡನಬಿಟ್ಟಿಹರು-ಗರತಿ
ಕಂಡುನಗುತ್ತಿಹರು || ಮಿಂಡರಬೆರೆದಿಹರು-ಮೇಲತಿ-ದಿಂಡೆಯರಾಗಿಹರು | ಭ
ತನದಿ ಪರಗಂಡಸರೊಳು ಸಮದಂಡಿಯೆನಿಸಿ ಬಲುಹಂಡಿಸುತಿರ್ಪರೋ ||೩|| ಕ

ಯೊಳು-ಕ್ಲೇಶವ ಪೇಳಲು ಮತಿತಾಳು | ಕೀಳುಜನರಬಾಳು | ಕಿವಿಯಲ್ಲಿ
ುಹುದೆ ಪೇಳು ॥ ಕಾಳಮೂಳಿಯರಮೇಳದಿ ಹಿಗ್ಗುವ ಬಾಳುಗೇಡಿಜನರೂಳಿಗ
ಘನ ||೪|| ಧರೆಯೊಳಧಿಕವಾದ ಶ್ರೀಪುಲಿ-ಗಿರಿಯೊಳು ನೆಲೆಯಾದ-ಸಿರಿವರನಿಜ
-ಸೇವೆಯ-ಕರುಣಿಸು ಬಹುಮೋದ॥ಶರಣಾಭರಣ ನಿಜ | ಕರುಣವತೋರಿಸು
ವಿಠಲಧೊರೆ ವರಪದಯಾನಿಧೆ ||೫||

## 64. ರಾಗಾ—ವಸಂತಭೈರವಿ.

ರಾಮಭಜೇ ತೇ ಪದಯುಗಳಂ - ಸೀತಾ ರಾಮಭಜೇ ತೇ ಪದಯುಗಳಂ
ರಾಮಸುಂದರ ಘನ ಶ್ಯಾಮರಘೂದ್ವಹ ||ಅ|| ದಶರಥಹೃದಯಾನಂದಕರಂ-
ಶಗಣಚಿತ್ತಾಮೋದಕರಂ ||೧|| ಪೂರಿತ ಕೌಶಿಕಯಜನಂ|ಸಂ ತಾರಿತಗೌತಮ
ಂ ||೨|| ಖಂಡಿತಶಂಕರ ಚಾಪಂ | ಪರಿ-ದಂಡಿತಭಾರ್ಗವ ಕೋಪಂ || ೩ ||
ೃತ ಜಾನಕೀ ಹೃದಯಂ-ದೂರೀಕೃತಪಾತಕನಿಚಯಂ ||೪|| ಪಾಲಿತಮಾತಾಪಿ
ಚನಂ - ಸಂ ಲಾಲಿತ ಮುನಿಜನ ಸ್ತುತಿರಚನಂ ||೫|| ಭರತಸಮರ್ಪಿತ ನಿಜರಾ
ಮುನಿವರಭಾರದ್ವಾಜಾರ್ಪಿತ ಭೋಜ್ಯಂ ||೬|| ದಂಡಕಾರಣ್ಯಪಾವನಚರಣಂ
ಂಡವಿರಾಧಪಾತಕಹರಣಂ ||೭|| ಕುಂಭಜಾರ್ಪಿತ ಶರಕೋದಂಡಂ|ಸಂರಂಭ
ತರಾಕ್ಷಸಷಂಡಂ ||೮|| ಪಂಚವಟೀತಟಕೃತವಾಸಂ | ದೃಗಂಚಲ ಧೃತಜಗ
ಲ್ಲಸಂ ||೯|| ಶೂರ್ಪನಖೀವಚನಾಲೋಲಂ | ಸಹಜಾರ್ಪಿತವಿವಿಧಾಯುಧ
ಂ ||೧೦|| ರೂಪನಿರ್ಜಿತ ಸುಮಬಾಣಾಂಗಂ | ವಿರೂಪಿತ ದುಷ್ಟ ಶೂರ್ಪನ
ಗಂ ||೧೧|| ಖರತರ ಖರದೂಷಣಕಾಲಂ | ಸುರ, ನರವರ ಮುನಿಗಣ ಪರಿ
ಂ || ೧೨ || ಮಾಯಾಮೃಗಾರ್ಪಿತ ಬಾಣವರಂ - ಜಟಾಯುಸಂಪಾದಿತ
ಕವರಂ || ೧೩ || ರಾವಣಹೃತನಿಜ ಪತ್ನೀಕಂ | ಲೋಕಾವನಗತಕೋಪೋ
ಕಂ || ೧೪ || ಸಾಧಿತಶಬರೀ ಮೋಕ್ಷಕರಂ - ಕಬಂಧಬಂಧನ ಮೋಚನ
ರಂ || ೧೫ || ವಾತತನೂಭವ ಕೃತಸ್ತೋತ್ರಂ-ಪಂಪಾತಟಿನಿರ್ಮಿತಸುಕ್ಷೇತ್ರಂ
೬ || ಶಿಕ್ಷಿತಸಂಕ್ರಂದನತನುಜಂ - ಸಂರಕ್ಷಿತಚಂಡಕಿರಣತನುಜಂ || ೧೭ ||
ಾಲೋಕನ ಕೃತಕಾಮಂ - ನಿಜಧೂತಾಮೋದನ ಸುಪ್ರೇಮಂ || ೧೮ ||
ಕರಭೂಷಣ ದಾತಾರಂ-ಘುರವಿಜಯುವನಾಲಯುಪರಿವಾರಂ || ೧೯ || ಧೂತಾ
ಶುಭದೃಷ್ಟಾಂತಂ - ವಿಜ್ಞಾತನಿಜಸ್ತ್ರೀ ವೃತ್ತಾಂತಂ || ೨೦ || ಭೀಷಣಜಲ
ಬಂಧಕರಂ - ವಿಭೀಷಣಸಂರಕ್ಷಣ ಚತುರಂ || ೨೧ || ಶೋಷಿತರಾವಣ

ಜಲಧಿಂ-ಸಂತೋಷಿತ ದೈವತಪರಿಧಿಂ ॥ ೨೨ ॥ ಸೀತಾಸಮಾಶ್ರಿತ ವಾಮಾ
ಪರಿಭೂತಪಾತಕ ನಿಜನಾಮಾಂಕಂ ॥೨೩॥ ಸ್ವೀಕೃತಸಾಕೇತಾವಾಸಂ-ಅಂಗೀ
ಮಾನುಷ್ಯವಿಲಾಸಂ ॥ ೨೪ ॥ ವರವ್ಯಾಘ್ರಭೂಧರ ಕಲ್ಪತರುಂ - ಶ್ರೀ ವರದ
ಮತಿಶಯರುಚಿರಂ ॥ ೨೫ ॥

## 65 ರಾಗಾ—ಸುರಟಿ—ಆದಿ.

ಮಳೆಯ ಪಾಲಿಸೈಯ್ಯ - ಮಂಗಳ-ನಿಳಯ ಲಾಲಿಸಯ್ಯ ॥ಪ॥ ಇಳೆಯ
ಮಳೆಯನು, ತಳೆಯದೆ ತೃಣಗಳು | ಬೆಳೆಯದೆ ಗೋವುಗಳಳಿವುವಯ್ಯಾ ॥
ಗೋವಿಪ್ರರ ಕುಲವ-ಕಾಯುವ-ದೇವನು ನೀನಲ್ಲವಮೇವುಗಳಿಲ್ಲದೆ ಗೋವುಗಳ
ಸಾವುವು ನಿನ್ನುಳಿದಾವನು ಕಾವನು ॥ ೧ ॥ ಕೆರೆಯೊಳು ನೀರಿಲ್ಲಾ-ಬಾವಿಗಳ
ತೆಯ ಸೋರಿಲ್ಲಾ ॥ ತುರುಗಳು ಜೀವನದಿರವನು ಕಾಣದೆ | ಹರಣವ ಬಿಡು
ಕರುಣದಿ ಬೇಗನೆ ॥ ೨ ॥ ಬಲರಿಪುಖಾತಿಯಲಿ - ಬಾಧಿಸೆ ಜಲಮಯ
ಯಲಿ | ಚಲಿಸದೆ ಕರದೊಳಾಜಲವನು ಕೊಡೆವಿಡಿದುಳುಹಿದೆ ಗೋವ್ಗಳ. ಬಳ
ನೀಗಳುಂ ॥೩॥ ಜಲನಿಧಿಕೃತಶಯನ ಶಾರದ ಜಲರುಹದಳನಯನ ॥ ಜಲಧೀ
ಜಲಚರಮಾರುತಿ | ಜಲಜಕರಗಳಿಂ ಜಲದಾಗರದಿಂ ॥೪॥ ದಾರಿಯ ಜನರೆಲ್ಲ-ಬ
ಬಾಯಾರಿ ಬರುವರಲ್ಲಾ ॥ ದೂರದಿಂತಂದಿಹ ನೀರನುಲೋಭದಿ | ನಾರಿಯ
ವಿಚಾರಿಸ ತೀರ್ಪರು ॥ ೫ ॥ ಬೆಳದಿಹ ಸಸ್ಯಗಳು-ಬಿಸಲಿನ-ಜಳದಲಿ ಬಾಡಿಹವು
ನಳಿನನಯನನಿನ್ನೊಲುಮೆಯತೋರಿಸಿ | ಘಳಿಲನೆ ಪೈರುಗಳುಳಿಯುವ
ದೊಳು ॥ ೬ ॥ ಕರುಣಾನಿಧಿಯೆಂದು-ನಿನ್ನನು-ಶರಣುಹೊಕ್ಕೆನಿಂದೂ ॥ ಶರಣಾ
ರಣಪುಲಿಗಿರಿಯೊಳು ನೆಲಸಿಹ| ವರದವಿಠಲದೊರೆವರದ ದಯಾನಿಧೆ ॥ ೭ ॥

## 66. ರಾಗ—ಶಂಕರಾಭರಣ—ಆದಿತಾಳ.

ಶ್ರೀ ಶ್ರೀನಿವಾಸ-ಶ್ರೀಭೂವಿಲಾಸ-ಶ್ರಿತಜನಪೋಷ-ಪಾಹಿಸುವೇಷ ॥
ಅಚ್ಯುತಮಾನ ಮದಚ್ಯುತವಿ ಪಚ್ಛಿನ್ನಮನೋರಥ, ನಿಚ್ಚಿತ (?) ಪಾಹಿ ॥ ೧
ಅಂತರಹಿತನಿತ್ಯಾ ನಂತಮಹಿಮ ದುರಂತವಿಕ್ರಮ ದನುಜಾಂತಕ ಪಾಹಿ ॥ ೨
ಗೋವಿಂದ ನತಸುಮನೋವೃಂದ ದಳಿತತಮೋವೃಂದ, ಪೋಷಿತ ಗ
ಬೃಂದಪಾಹಿ॥೩॥ಕೇಶವ ಸಕಲ ಲೋಕೇಶ ಗೌರೀಶ ವಾಗೀಶಸನ್ನುತ ಕೋಶವ
ಪಾಹಿ ॥೪॥ ನಾರಾಯಣಭಕ್ತಪರಾಯಣಪರಿ | ವಾರಾಯಿತ ಸುರವಾರಮಾಂ
ಹಿ ॥೫॥ ಮಂದರಧರ ಮುಚುಕುಂದವರದ ಆ | ನಂದಸದನ ಗೋವಿಂದಮಾಂಪಾ

ವಿಷ್ಣೋಸುಜನವರ್ಧಿಷ್ಣೋಸಂ | ತೋಷಿತಜಿಷ್ಣುಸುರಜೇಷ್ಣೋಮಾಂಪಾಹಿ
ಮಧುಸೂದನ ದುರ್ಮದಭೇದನ ಬಹುವಿದಭೇದನ, ನುತಬುಧಜನಪಾಹಿ||೯||
ಯನುಪಿತ ನಿಜ ಕ್ರಮ ಜಿತವಿಶ್ವಶಕ್ರಸಹಜತ್ರಿವಿಕ್ರಮಪಾಹಿ || ೧೦ ||
ನದೈತ್ಯವಿರಾಮ ನಮಿತ ಸುರಕಾಮನ ಮುನಿಜನಪ್ರೇಮಮಾಂಪಾಹಿ ||೧೧||
ರ ಕರಧೃತ ಭೂಧರಚಕ್ರಗದಾಧರ ಕೌಸ್ತುಭ ಕಂಧರಪಾಹಿ ||೧೨|| ನಾಕೇಶ
ಹೃಷೀಕೇಶ ಮುನಿಹೃದಯಾಕಾಶ ಗೋಚರರಾಕೇಂದು ಪಾಹಿ || ೧೩ ||
ನಾಭ ನತಪದ್ಮಜಮಾನಸ ಪದ್ಮಗೋಚರ ಪದಪದ್ಮಮಾಂಪಾಹಿ || ೧೪ ||
ೋದರ ಸುಜನಾಮೋದನ ಧೃತ ಕೌಮೋದಕ ಜಿತಕಾಮಮಾಂಪಾಹಿ ||೧೫||
ಷರಹಿತಗುಣ ಭೂಷಣ ನತಜನ | ಪೋಷಸಂತೋಷಿತ. ಶೇಷಮಾಂಪಾಹಿ
ಕಿಶಯನ ವಿಕಾಶ ಕಮಲನಯನಾಸುರದಮನ ಶರಾಸನಪಾಹಿ || ೧೭ ||
ಮರ್ದನ ಜಗದಿಷ್ಟವರ್ದನಸುರ ಕಷ್ಟಕೃಂತನಪರಿತುಷ್ಟಮಾಂಪಾಹಿ || ೧೮ ||
ವಿಠಲವ್ಯಾಘ್ರಧರಣೀಧರಾಗ್ರವಿಹರಣ ಸಕಲ ಗುಣಾಭರಣಮಾಂಪಾಹಿ||೧೯||

## 67. ರಾಗ—ಕಲ್ಯಾಣಿ—ಆದಿತಾಳ.

ನೀನುಳಿಯೆ ರಕ್ಷಕರ ಕಾಣೆನೀ ಜಗದೊಳಗೆ| ಶ್ರೀನಿವಾಸ ಜಗನ್ನಿವಾಸ||ಪ||
ರಕ್ಷಕ ನಿಖಿಲ ಮಾನವರ ಮಾನಾಭಿ ಮಾನದೊಡೆಯನುನೀನೇಯಲ್ಲದಿಲ್ಲಾ
|| ನಕ್ರಮುಖದಲ್ಲಿಸಿಕ್ಕಿ ದುಃಖಿಸುವ ಕರಿರಾಜ| ಚಕ್ರವರ್ತಿಯು ಶರಣು
ಕ್ಕಿನೆನಲು|| ಚಕ್ರವನು ಪಿಡಿದುನೀನಕ್ಕರೆಯೊಳೈತಂದು ನಕ್ರವದನವಸೀಳಿ ರಕ್ಷಿ
ಗಜವಾ-ದೇವ- || ೧ || ಹಿಂದೆ ನಾನಾನ್ನಗಿರಿಯಿಂದ ಬಹದಾರಿಯೊಳು,
ುಗಳೀಚಲು, ಭಂಡಿ ಸಂಜೆಯೊಳಗೆ || ಮುಂದಾಗ ಜೊತೆಯೊಳಗೆ ಬಂದುಜನ
ೀ ಬಂದುಬೆಳಕನುತೋರಿ ಮಂದೆಗೂಡಿದೆ ಕೃಷ್ಣಾ || ೨ || ಇಂದುನಿಜ
ಮು ನೊಂದಳುಬ್ಬಸರೋಗದಿಂದ ಗಾಳಿಯದೀಪದಂದಮಾಗಿ || ನಂದಿಪೋಗದ
ಷ್ಣ ಬಂದು ನೀಮರೆಯಾಗು ಎಂದು ಮೊರೆಯಿಡಲೀಗ ಬಂದುಸಲಹಿ
ದೆ || ೨ || ಗುರುಸುತನ ಸಂಯಮಿನೀ | ಪುರದಿಂದತಂದಿತ್ತೆ, ತುರು
ಮ್ಸುರಸುಗಳನು ಮರಳಿಪಡೆದೆ || ನರಪೌತ್ರನನುಬಾಣದುರಿಯಿಂದ ರಕ್ಷಿ
| ಸರಿಯಾರು ನಿನಗೆಸುರನರಭುಜಂಗರಲ್ಲಿ || ೪ || ತರಳಧ್ರುವ ಪ್ರಹ್ಲಾದ
ಣಿ ಪಾಂಚಾಲಿ ಕುರು ವರವಿಭೀಷಣ ತಾಪಸರನುಪೊರೆದೆ || ಶರಣರನುಪಾಲಿ
ಬಿರುದು ಧರಿಸಿಹ ವ್ಯಾಘ್ರಗಿರಿಯೊಳಗೆ ನೆಲಸಿರುವ ವರದವಿಠಲರಾಯ ||೫||

## 68. ರಾಗಾ-ಕಲ್ಯಾಣಿ-ಅಟ್ಟತಾಳ.

ಪಚ್ಚೆಯು ಬಂದೀಗ-ಶ್ರೀಪುಲಿಗಿರಿ-ಪಚ್ಚೆಯ ನೋಡಿಬೇಗ ॥ ಪ ॥ ಸ
ನಂದರೂಪಚ್ಚರಿಯಾದಂಥ | ಮುಚ್ಚುಮರೆಯಿಲ್ಲದಚ್ಯುತ ನೆಂಬುವ ॥೧॥ ಕೈಗ
ವದಲ್ಲವೈತ-ಕ್ಕಡಿಯಲ್ಲಿ-ತೂಗಿನೋಡುವದಲ್ಲವೈ ॥ ಆಗಮಾಂತಗಳಲ್ಲಿ ಯೋ
ಯದಲ್ಲಿ | ಭಾಗವತರೊಳನು ರಾಗದಿಮರೆಯುವ ॥ ೧ ॥ ಬೆಲೆಯುಕಟ್ಟುವದ
ಈ ಪಚ್ಚೆಯ ನೆಲೆಯಕಂಡವರಿಲ್ಲವೈ ॥ ನಲಿದು ಧ್ಯಾನಿಪರಿಗೆ-ಒಲಿದುತೋರುವ
ಜಲಧರವರ್ಣದ ಜಲಜಾಕ್ಷನೆಂಬುವ ॥ ೨ ॥ ಧರೆಯೊಳುತ್ತಮವಾಗಿಹ-ಶ್ರೀ
ಯೆಂಬ-ಗಿರಿಯೊಳು ನೆಲೆಯಾಗಿಹ | ಚರಣವನಂಬಿದ ಶರಣರ ಪೊರೆಯುವ |
ವಿಠಲಧೊರೆ ವರದನೆಂದೆಸರಾದ ॥ ಪಚ್ಚೆ ॥ ೩ ॥

## 69, ರಾಗಾ—ಶ್ರೀರಾಗಾ.

ಸರ್ವಾಂತರ್ಯಾಮಿ-ನೀನೇಸರಿ-ಸರ್ವಜ್ಞನು ಸ್ವಾಮಿ॥ ಪ ॥ ಸರ್ವ
ರಣ ಸರ್ವಾಧಾರನು| ಸರ್ವಶರಿರೀಕ ಸರ್ವನಿಯಾಮಕ ॥ ಅ ॥ ಹರಿತನಯನಿಗ
ಸ್ವಶಕ್ತಿಯ ಹರಿಕೊಡುವನು ಬಂದು | ಹರಿತನುಜನಿಗದು ಹರಿಯದು ಯೆನ
ಹರಿಸುತನನು ಗುರಿಮಾಡಿದೆ ಹರಿ ॥೧॥ ದ್ರೋಣನಸುತ ಬಂದು | ನಿಶಿಯೊಳು
ಕಾಣಿಸುವನು ಎಂದೂ॥ಪ್ರಾಣಪದಕರನು ಕಾಣದಂತೆ ಬಲು ಜಾಣತನದಿ ಸಪ
ರಮಾಡಿದೆ ॥೨॥ ಮರುತನ ಸುತನೆಂದು ಧೃತರಾಷ್ಟ್ರನು ಕರದಪ್ಪುವನೆಂದು॥ಭ
ಲೋಹ ದೊಳೆರಕದ ಭೀಮನ ವಿರಚಿಸಿ ಶರಣನಹರಣವನುಳುಹಿದೆ ॥ ೩ ॥ ಶೈ
ಗುಹೆಯೊಳಗೆ -ಮಲಗಿದ್ದ ನೃಪಾಲನ ಖತಿಯೊಳಗೆ ಕಾಲಯವನನಂ ಕಾಲನಕಾ
ಮೇಲೆಶರಧಿಯೊಳಾಲಯ ಮಾಡಿದೆ ॥೪॥ ಪರಮ ಋಷಿಯನಂದು - ತಾಪಿಡಿಯ
ದುರುಳಪುಲಿಯುಬಂದು ॥ ಕರದಖಡುಗದಿಂ - ಹರಿಯನುಖಂಡಿಸಿ ಶರಣನಸಲ
ವರದವಿಠಲಹರಿ ॥ ೫ ॥

## 70. ರಾಗಾ—ಸುರಟಿ.

ಬೃಂದಾವನವೇರಿ - ಬಹುನಲವಿಂದ ಬಂದಶೌರಿ ॥ ಪ ॥ ಬೃಂದಾರಕ
ದಿಂದಶೌರಿಯಾ ನಂದವ ಸೇವಕ ಬೃಂದಕೆತೋರಿ ॥ ಅ ॥ ಕುಂದಮುಕುಳದಿಂ
ಕುಮುದಸು ಗಂಧಿಯುಗಳಿಸಿಂದಾ ॥ ಕೆಂದಾವರೆ ಶ್ಯಾವಂತಿಗೆಜಾಜಿಯಿಂದ ರ
ಸೊಗಸಿಂದಲಿ ಮೆರೆಯುವ ॥ ೧ ॥ ಸುತ್ತಿರೆ ಹಸ್ತಿಗಳೂ - ಕೂರ್ಮನು ಪೊ
ಮಧ್ಯದೊಳು ॥ ಮತ್ತೆಫಣೇಂದ್ರನ ಮಸ್ತಕದಲ್ಲಿರೆ| ಸ್ವಸ್ತಿಕಾದಿಬಹು ಚಿತ್ರ

ಧಿಪ ||೨|| ಪಂಕಜಚಿಹ್ನೆಗಳಾ-ಸೂರ್ಯಶ-ಶಾಂಕಸುರೇಖೆಗಳಾ || ಶಂಖಚಕ್ರ ದಾಂಕಿತ ದಿವ್ಯವಿಟಂಕದಿಂದ ಬಹು ಬಿಂಕದೊಳೆಸೆಯುವ ||೩|| ಕೋಟಿಯ ತೆನೆ ಲಿ-ದಿವ್ಯವಧೂಟಿಯರೊಲವಿನಲಿ | ನಾಟಕರಚನೆಯ ಪಾಠಕರಂದದಿ | ೀಟಕರಿಗೆ ಬಹು ದೀಟಿಲಿ (?) ತೋರುವ ||೪|| ಶಾರದಾಭ್ರನೀಲ-ಶರೀರದಿ-ಹೈರ ಮಚೇಲಾ | ಹಾರಮಕುಟಕೇಯೂರಕಟಕಮಂ ಜೀರಭೂಷಣೋದಾರವಿಹಾರ | ಮಂಗಳರವದೊಳಗೆ-ಶಂಖಮೃದಂಗ-ಧ್ವನಿಮೊಳಗೆ | ಸಂಗತ ಸುರವಾರಾಂಗ ರು ಗಾನಂಗಳಿಂದ ನಾಟ್ಯಂಗಳರಚಿಸಲು ||೬|| ವರವಿಪ್ರರು ಪೊಗಳೆ-ಛತ್ರಚಾ ಗಳ ನೆಳಲೊಳಗೆ || ಪರಿಪರಿಜ್ಯೋತಿಗಳೆಸೆಯಲು ಪುಲಿಗಿರಿ | ವರದವಿಠಲನು ವರ ಏರುತ ||೭||

## 71 ರಾಗ—ದ್ವಿಜಾವಂತಿ.

ವಂದೇಹಂ ಕಮಲಾದ್ರಿನಿವಾಸಂ-ಪಲ್ಲವೀಶಂ-ಇಂದೀವರಭಾಸಂ || ಪ || ದಾವನಪರಿಶೀಲನಮನುಗತ | ಬೃಂದಾರಕಗಣಾನಂದವಿಲಾಸಂ || ಅ || ತೀರ್ಥಲಸದಷ್ಟಶೈಲಪರಿ ಶಿಷ್ಟಶಿಖರಿವಿಹಾರಂ | ಅಷ್ಟಮೂರ್ತಿಪರಮೇಷ್ಠಿ ರ್ಚಿತ-ಮಷ್ಟಸಿದ್ಧಿದಾತಾರಮುದಾರಂ ||೧|| ಅಂಬುಜಭವಪಿತ ಮಂಬುಜಪತ್ರ ಂಬಿನಯನಯುಗಳಂ | ಜಂಭನಿಸೂದನ ಡಂಭರಹಿತ ಘಟ ಸಂಭವನುತ ಣಾಂಬುಜಯುಗಳಂ ||೨|| ನಂದಗೋಕುಲಾನಂದಕಾರಣ ನಂದಗೋಪವರ ಕರು | ಮಂದಹಾಸವಿಜಿತೇಂದುಕಿರಣಮತಿ-ಸುಂದರಾಂಗಮಾನಂದವಿತರಣಂ ||೩|| ಮಧುರಸ್ವನಚಲಿತಹೃದಯಗೋ | ಕುಲಮೋಹನವೇಣುನಿನಾದಂ || ಚಲವ ಕ್ವಣ ವಿಲಸಿತಪಲ್ಲವ | ಲಲನಾಜನಸಂಮಿಳಿತವಿನೋದಂ ||೪|| ಧರಣೀಭರ ಹರಣೋಚಿತವರ ಕರುಣಾಯುತನಿಜವೇಷಂ | ಹರಿಣಾರಿಮಹೀಧರಣಾಲಯ ವರದಾನತಪದಶರಣಸುಪೋಷಂ ||೫||

## 72. ರಾಗ—ರೇಗುಪ್ತಿ.

ಪರಮಪುರುಷ ಬಾರೋ-ಪಾವನ-ಚರಣಯುಗವ ತೋರೋ ||ಪ|| ಶರ ಪೊರೆಯುವ ಕರುಣೆಗಳರಸನೆ | ನಿರುತವುನಿನ್ನನೇ ನೆರೆನಂಬಿದೆ ಹರಿ || ಅ || ಕ್ಕ ನೀನೆ ಎಂದು-ನಂಬಿದೆನಕ್ಕರಿಂದ ಬಂದು | ಟಕ್ಕನಿಂದ ನೀ ನಕ್ಕಜವಮಾ ು, ತಕ್ಕುದೇನು ಘನ ರಕ್ಕಸವೈರಿಯೆ ||೧|| ಇಷ್ಟದೇವನಾರೋ-ಮನಸಾ- ಷ್ಟವಕೊಡುಬಾರೋ | ಅಷ್ಟರೊಳಗೂ ಬಹಳಿಷ್ಟದೆನೆಲಸಿದ || ಕೃಷ್ಣಮೂರ್ತಿ

ನೀಂದ್ರಪ್ರಿಸು ನಮ್ಮನು ||೨|| ಕೇಣವ್ಯಾಕೋಹರಿಯೇ-ಕಣ್ಣಿಲಿ-ಕಾಣಬಾ
ಧೊರೆಯೇ || ಪ್ರಾಣದೊಡೆಯ ನೀ ಕಾಣಿಸು ಹರ್ಷವ | ಕಾಣೆ ನಿನಗೆ ಸ
ಜಾಣತನದಿಹರಿ ||೩|| ವಾರಿಧಿಕೃತಶಯನ-ವಿಕಸಿತ-ವಾರಿಜದಳನಯನ || ಕ್ಷಿ
ದೊಳದ್ಬುನೀ ನೀರೊಳಗದ್ದುಕಂ | ಸಾರಿ ನಿನ್ನನೆ ಸಾರಿದೆ ನರಹರಿ ||೪|| ಧರೆಯ
ಧಿಕವಾದ-ಶ್ರೀಪುಲಿ-ಗಿರಿಯೊಳುನೆಲೆಯಾದ || ಶರಣಾಭರಣ ನಿಜ | ಕರು
ತೋರಿಸು | ವರದವಿಠಲಧೊರೆ ವರದ ದಯಾನಿಧೆ ||೫||

## 73. ರಾಗಾ—ಸಾವೇರಿ.

ಸೇವೇ ಶ್ರೀರಮಣಂ-ಸದಾ-ಸೇವಕಾರ್ತಿಹರಣಂ ||ಪ|| ಪಾವಕ ಶತರು
ರುಚಿರಾಭರಣಂ | ಪಾವನವ್ಯಾಘ್ರಾಜಲವಿಹರಣಂ ||ಅ|| ಪುಂಡರೀಕಾಯ
ನೇತ್ರಂ | ಮಂಡಿತಖಗಪತಿಪತ್ರಂ || ಖಂಡಪರಶುಕೃತಸನ್ನುತಿಪಾತ್ರಂ
ಚಂಡಕಿರಣಶತಸನ್ನಿಭಗಾತ್ರಂ ||೧|| ಕುಲಿಶಧರಾತ್ಮಜಮಿತ್ರಂ—ಸುಲಲಿತ ಕರಧ
ಗೋತ್ರಂ | ಕಲಿತರಥಾಂಗಧರಾಸಿತಸುತ್ರಂ | ಕಲಿಮಲಖಂಡನನಿಜಚಾರಿತ್ರಂ ||
ಭಾವಿತಜನಮಂದಾರಂ-ಭಾವಜ-ಜನಕಮುದಾರಂ || ಸೇವಕರಕ್ಷಣ ಧೃತಶರೀರ
ದೇವಸಮೂಹಾಕಲಿತವಿಹಾರಂ || ೩ || ಶಂಕರಹೃದಯಧ್ಯೇಯಂ | ಕಿಂಕರ
ಸಮುದಾಯಂ || ಪಂಕಜನಿಲಯಾಲಿಂಗಿತಕಾಯಂ | ಸಂಕಟಮೋಚಕ ನಿಜನಾ
ಧೇಯಂ ||೪|| ಪರಮಪುರುಷಮನವದ್ಯಂ | ಸರಸಗುಣಾಕರಮಾದ್ಯಂ ||
ಯೋಗಿಜನಹೃದಯಾರಾಧ್ಯಂ-ವರದವಿಠಲಮಖಿಳಾಗಮ ಬೋಧ್ಯಂ ||೫||

## 74. ರಾಗ—ದೇಶಿ.

ಎಂತೋಪೂಜಿಪುದಂತರ್ಯಾಮಿಯಾ - ನಂತಾದಿರಹಿತನ | ಚಿಂತಾದೂ
ಚಿನುಮಯ ರೂಪನಾ || ದೆಂತೋಧ್ಯಾನಿಪೆನಾ || ಪ || ಈಶ '—ವಿಶ
ವಾಹನಗೀಸಚರಾಚರವಿಾಸಲಿಗೊಳಗಲ್ಲಾ | ಆಸನವಿತ್ತರೆ ವಾಸುಕಿಭೋ
ನಿವಾಸಿಗೆ ತರವಲ್ಲಾ || ೧ || ಚರಣದಿಗಂಗೆಯ ಧರಿಸುವಾತನ | ಚರಣ
ತೊಳೆಯುವರೇ | ತರಣಿಗೆ ತೇಜದಭರಣಿಗೆ ದೀಪದ ಸರಣಿಯ ತೋರುವರೆ ||೨
ವಿಗ್ರಹರಹಿತನಿಗರ್ಘ್ಯದಪೂಜೆಯು ದುರ್ಘಟಕಾರ್ಯವಲೆ | ಭರ್ಗಾದ್ಯಮರರ
ವರ್ಗವು ತಮ್ಮ ನಿಸರ್ಗದಿಕಾಣದಲೆ || ೨ || ಕಲಶಾಂಬುಧಿಯೊಳು ನೆಲಸಿ
ಮೂರ್ತಿಗೆ-ಸಲಿಲಸ್ಪರ್ಶನವೆ | ಜಲರುಹನೇತ್ರಗೆ | ಜಲರುಹಗಾತ್ರಗೆ | ಜಲದ
ಮಜ್ಜನವೆ ||೪|| ಸ್ವರ್ಣಾಂಬರಗಳ ಬಣ್ಣಿಸುತುಡುವಗೆ | ಬಣ್ಣದವಸ್ತ್ರಗಳೆ

ಸ್ತಿತ ಕೌಸ್ತುಭರನ್ನದ ತೊಡವಿಗೆ | ಬಿನ್ನಣದೊಡವೆಗಳೆ ||೫|| ಬಿಸಜನಾಭನಿಗೆ ಸುವಮಾಸ್ತ್ರನ ಮಾನಸದಿಂಪಡೆದವಗೆ | ಮಿಸುಪತುಲಸಿಯಿಂದೆಸೆವಗೆ ಪೂಗಳ ರಮನೋಹರವೇ ||೬|| ಗಂಧವಾಹನ ಸುವಿಂದಳಿಸೃಜಿಸಿದ ಗಂಧವತೀಶನಿಗೆ | ರಧೂಪಗಳು ಬಂಧುರಂಗಳೆ ಗಂಧರ್ವಾನತನಿಗೆ ||೭|| ವೇದಗೋಚರಿಸುವೇದಾ ನು | ವೇದೋದ್ಧಾರಕನು || ವೇದಲೇಶದಿಂಮೋದಿಸುವನೋ ಸಮ್ಮೋದಪರಾ ನೆ ||೮|| ಪೊಕ್ಕರೆಜಲಮುಂ ಕುತ್ತಿಗೆನೆರೆಯುದವಸ್ತು ಪರಾತ್ಪರನಾ || ನಿತ್ಯ ತ್ಯನಂ ಚಿತಾನ್ನಗಳಿಂ ತೃಪ್ತಿಪುದೆಂತುಜನಾ ||೯|| ಮಂತ್ರಮೂರುತಿಗೆ ಮಂತ್ರ ಗೆ ಸ್ವತಂತ್ರವಿಹಾರನಿಗೆ || ಮಂತ್ರಯಂತ್ರಗಳ ತಂತ್ರವದೆಂತೊ ಮಂತ್ರಾ ರನಿಗೆ ||೧೦|| ಅಂತರ್ಬಹಿಯೊಳಗಂತರವಿಲ್ಲದನಂತಗುಣಾತ್ಮಕನಾ | ಎಂತು ದಕ್ಷಿಣೆಯಾಂತು ನಮಿಪೆಜಗದಂತಶರೀರಕನಾ ||೧೧|| ಸರ್ವಾಧಾರನ ಸರ್ವ ರನ ಸರ್ವವ್ಯಾಪಕನಾ | ಸರ್ವನನಮಿಸುವಗರ್ವವೆಂತುಟೊ ಶಕ್ರನಮುಸ್ಕ್ರ ||೧೨|| ಧರೆಯೊಳುಪುಲಿಗಿರಿವರದ ವಿಠಲನ ಚರಣವಭಜಿಸುವರ | ಸಿರುತದಿ ಜಿಪ ಹರುಷವುಸಾಲದೆ ಹರಿದಾಸೋತ್ತಮರಾ ||೧೩||

## 75. ರಾಗಾ—ಮಾಂಜಿ.

ಬದುಕಿಸೀ ಪಶುಗಳನೂ ಭಗವಂತನೀನು || ಪ || ಬದುಕಿಸೀ ಪಶುಗಳ ಭವ ರೋಗವೈದ್ಯನೆ | ಕದಲಿಸೀ ರೋಗವ – ಕರುಣಿಗಳರಸನೆ || ಅ || ಗೋವುಗಳೆಲ್ಲಾ ಟ್ಟಿ – ನೋವಿನಿಂ ಕಂಗೆಟ್ಟು || ಮೇವನುಬಿಟ್ಟವಿ ದಾವರೋಗವೋಕಾಣೆ || ಹೊಟ್ಟೆ ಕಳೆದು ಕಂಗೆಟ್ಟುಧಾತುಗಳೆಲ್ಲಾ | ಕೆಟ್ಟು ಜೀವಂಗಳ ಬಿಟ್ಟು ದಮುನ್ನ || ೨ || ನಾಲಿಗೆನೀಡವು ಕಾಲುಕೆಟ್ಟವುಕಂ | ಣಾಲಿ ಕೆಂಣಾಲಿ ಮಾಡವು | ಮೂಲವೆ ತಿಳಿಯದು || ೩ || ಗೋವುಗಳಿಗೆ ಭೂದೇವರುಗಳಿಗೆಲ್ಲ | ರನೀನಲ್ಲವೆ – ದೇವಕೀ ತನಯನೆ || ೪ ||ಸತ್ತವರಿಗೆಜೀವ – ವಿತ್ತುಬದುಕಿಸಿದೆ|| ತ್ಯದೇವತೆನಿನ್ನ ತೊತ್ತಹಳಲ್ಲವೆ || ೫ || ದಾಸನು ನಾನೆಂಬ | ವಾಸಿಯುಳ್ಳರೆ ಗ | ವಾಸಿಯುಮಾಡಯ್ಯನೀ | ಮೋಸವಮಾಡದೆ || ೬ || ಇಷ್ಟದಿನೆನೆವರ ವಕಳೆವ ಪುಲಿ | ಬೆಟ್ಟದೊಳಿಹವರದ ವಿಠಲ ಕೃಷ್ಣನೀ || ೭ ||

## 76. ರಾಗ—ಮಾಂಜಿ.

ನಿನಗಿದು ಘನವೆ – ನಿತ್ಯಾತ್ಮಕ || ವನಜಭವಾದಿಗಳನು ಪಾಲಿಪದೇವ ||ಪ|| ಯನೀನಾದರೆ – ಬದುಕಿಸಿ ಪಶುಗಳ || ಮುದವನು ತೋರಿಸು | ಮಧುಸೂಧನ

ಈಗ ||೧|| ಇದಿರಿಗೆ ನೋಡಲಾ - ರದೆ ನಿನ್ನ ದೂರಿದೆ || ಇದುವೊಂದು ತಪ್ಪು
ನ್ನದು ಎಂದು ಮನ್ನಿಸು || ೨ || ವಿಷದನೀರನು ಕುಡಿ - ದಸುವನ್ನು ಕಳಕೊಂ
ಪಶುಪಾಲಕರಿಗೆನೀನಸುವಿತ್ತು ಪೊರೆದೆ || || ಹೊಟ್ಟೆಯೊಳಗೆಸತ್ತು ಹುಟ್ಟಿದ ಶಿ
ವನು | ಮುಟ್ಟಜೀವನವಿತ್ತೆ | ಕೃಷ್ಣಾ ಕೃಪಾಕರ || ೪ || ಗುರುಸುತನನುಯಮ
ಪುರದಿಂದ ಕರೆತಂದ | ಪರಮಶ್ರೀಪುಲಿಗಿರಿ ವರದವಿಠಲರಾಯ || ೫ ||

## 77. ರಾಗಾ—ದ್ವಿಜಾವಂತಿ.

ನೀರಜಾಕ್ಷನಿನ್ನೂರಿಗೆ ಪೋಗುವ ದಾರಿಯ ತೋರಯ್ಯ || ಪ || ಘೋ
ವಾದ ಸಂಸಾರವೆಂಬಕಾಂ ತಾರದಿ ತೊಳಲುವೆ ದಾರಿಯಕಾಣದೆ || ಅ || ಜನ್ಮಾ
ತರಕೃತ ಕರ್ಮಗಳೆಂಬುವ ಹೆಮ್ಮರಗಳು ಬೆಳೆದು | ಧರ್ಮನಿರೋಧವಿ ಕರ್ಮದ
ಬಳ್ಳಿಯು ಜಿಂಮನೆ ಬಿಗಿವಡೆದು || ಹಮ್ಮಿನ ಗುಂದಿಯ ಹೆಮ್ಮೆಯಕಂಟಕ
ನೆಮ್ಮನುಕಾಲಿಡ ಲಮ್ಮಗೊಡವು ಹರಿ || ೧ || ನಾರಿಯ ಮೋಹದ ಭಾರಿಯದು
ರ್ಗವು ದಾರಿಯೊಳಡಸಿಹುದು | ಮಿಾರಿಬರಲುಘನ ಚೋರರು ಕಾದಿಹರಾರುಮುಂದಿ
ಮುಳಿದು || ಮೂರುತೆರದೊಳಿಹ ಘೋರತಾಪಗಳು ಸಾರಿಸಾರಿ ಬಾಯಾರಿಸುತಿ
ರ್ಪವು || ೨ || ಮನೆ ಮನೆ ವಾರ್ತೆಗಳೆನಿಪ ಮಹಾನದಿಯನು ದಾಂಟುವೊಡ
ರಿದು | ಧನಕನಕಾದಿಗಳೆನಿಪ ಪಿಶಾಚಗಳನವರತವು ಬಿಡವು || ತನುಸಂಬಂಧದ
ಜನಗಳು ದುರ್ಮಾರ್ಗವನು ಪೇಳುತ ನಮ್ಮನು ಬಾಧಿಸುತಿರುವರು || ೩ || ಕ್ಷುದ್ರ
ವಿಷಯಗಳು ಛಿದ್ರವಹುಡುಕುವ ವಧ್ರುಗದೇಹದೊಳು ? ಕದ್ರುಸುತರವೊಲು ಪದ್ರ
ವಗೈವವಭದ್ರದ ಭೀತಿಗಳೂ || ನಿದ್ರೆಯೊಳೆಮ್ಮನು ಮುದ್ರಿಸಿ ಗೈವಳುಪದ್ರವ
ಜರೆಯೆಂಬುದ್ರಿಕ್ತಾಂಗನೆ || ೪ || ಸುರನರವರರೊಳು ತರಣೋಪಾಯವ | ನರಸಿದೆ
ಮನವಿವಿಸಿ | ನರಿಗಳಪರಿಯಲಿ ನರಳುವರೆಲ್ಲರು ನರಕಗಳನುಭವಿಸಿ || ಶರಣಾಗತ
ರನು ಪೊರೆಯುವ ಪುಲಿಗಿರಿ, ವರದವಿಠಲನಿಜ ಚರಣವ ನಂಬಿದೆ || ೫ ||

## 78. ರಾಗ—ರೇಗುಪ್ತಿ—ಅಟತಾಳ.

ತಿಗಣೆಯ ಕಾಟವೇ ಕಾಟ - ಚಲ್ವ - ಸುಗುಣೆಯ ಕೂಟವೇ ಕೂಟ||ಪ||
ಹಗಲಿರುಳೆನ್ನದೆ ಬಗೆಬಗೆ ರತಿಯೊಳು - ಸೊಗಯಿಸಿ ದೇಹಧಾತುಗಳನು ಕೆಡಿಸುವ
|| ಪ || ಮನೆಯೊಳು ತಿಗಣೆಯು ಹೆಚ್ಚಿತು - ಮನಸಿಜನವಸ್ತ್ರಕೆ ಮನಸೋತು ||
ಕಾಮುಕ| ಜನದಂತೆ ನಿಶಿಯೊಳಗನುದಿನ ಬಾಧಿಪ || ೩ || ಗೋಡೆ ಕಂಬಗಳಸಂದು
ಗಳಲಿ ಮನೆ ಮಾಡಿ ಹಾಸಿಗೆ ಮಂಚಾದಿಗಳಲಿ || ರೂಢಿಸಿ ಕಾಮಿನಿ ಕೂಡುವತೆರ

ೀಲಾಡಿ ಶರೀರದ ನಾಡಿಯು ನಿಲ್ಲಿಸುವ || ೨ || ಸದ್ದಡಗಲು ಜತೆಗೂಡುತ-
ಿದ್ರೆಯು ಸಮಯುವನೋಡುತ || ಹೊದ್ದಿ ಸಮೀಪವ ಮುಗ್ಧೆಯರಂದದಿ
್ಡುತ ನಮ್ಮ ನೊದ್ದಾಡಿಸುತಿಹ ||೩|| ಹೆಗಲಿನ ಮೂಲದೊಳೇರಿ-ನಮ್ಮ
ಸಂಧಿಗೆ ಸೇರಿ || ತೊಗಲಿನ ನರಕಕ್ಕೆ ತಗಲೆ ನಿದ್ರೆಯನಗಲಿಸಿ ಬೇಗದಿ
ಕದ್ದೋಡುವ ||೪|| ಚಿಗಟದ ಹಿಂದೊಡಗೂಡಿ - ನಮ್ಮ - ತೊಗಟೆರಕ್ತದ
ೀಡಿ | ತಿಗಟೆಯುಸಂದಿಸಿ, ಚಿಗಟದಪರಿಯಲಿ|ಬುಗುಟೆದ್ದಗಾಯುವ ವಿಗಟವ
ವ ||೫|| ನೋಟಕನೀನಾಗಬಹುದೆ - ಕಪಟ-ನಾಟಕಧಾರನೆ ಬರಿದೆ ||
ರ್ಮದಬಲು ಕೋಟಲೆಯುಂಬೆ ನಿಶಾಟದಲ್ಲಣ ನಿನ್ನ ಕೊಟದಜನರಿಗೆ
ುರಿತಕೋಲಾಹಲನೆಂದೆ-ನಿನ್ನ ಬಿರುದನು ಪೊಗಳುತನಿಂದೆ || ಧರೆಯೊಳು
ಪುಲಿಗಿರಿಯೊಳುನೆಲಸಿಹ | ವರದವಿಠಲ ನಿನ್ನ ಶರಣರಾದವರಿಗೆ ||೬||

## 79. ರಾಗಾ-ಆದಿತಾಳ.

ಯಾಕೇ ಕೃಪೆಬಾರದೋ-ಲೋಕರಕ್ಷಕ ನಿನ-ಗ್ಯಾಕೇ || ಪ || ಲೋಕರ
ದುಷ್ಟಕಾಕಶಿಕ್ಷಕ ನಿನಗ್ಯಾಕೇ || ಅ || ಪಕ್ಷಿವಾಹನನೆನಿ || ಲಕ್ಷಿಸದಿರಲು
ದಿ | ಲಕ್ಷಣವಲ್ಲವೊ ಶುಭಲಕ್ಷಣ ಮೂರುತಿನಿನ || ಗ್ಯಾಕೇಕೃಪೆ || ೧ ||
ೊಳೇ ಜಗವನಿಟ್ಟು | ರಕ್ಷಿಸುವಲಕ್ಷ್ಮೀಪತಿ || ದಕ್ಷಿಣಶೇಷಾದ್ರಿವಾಸ |
ಸಿನ||ಗ್ಯಾಕೇಕೃಪೆ || ೨ || ವಾಸವಸನ್ನುತ ಶ್ರೀನಿವಾಸ ನಿನ್ನದಾಸನೊಳು||
ವೆಣಿಸದೆಕಾಯೊ ದೋಷರಹಿತನೆನಿನ || ಗ್ಯಾಕೇ || ೩ || ಸೃಷ್ಟೀಶ ನಿನ್ನ
ೃಷ್ಟಿಯಿಂದ ನೋಡಿಯನ್ನ | ಕಷ್ಟವ ಬಿಡಿಸಿಮನದಿಷ್ಟವ ಪಾಲಿಸು || ೪ ||
ವರದ ಭವ | ತಾರಣಚರಣ ಗುಣ | ಪೂರಣ ವರದವಿಠಲ | ಕಾರುಣಿಕರ
ನ ||ಗ್ಯಾಕೇದಯಬಾರದು || ೫ ||

## 80. ರಾಗಾ-ಭೈರವಿ-ರೂಪಕ.

ಹರಿಯೆ ಯನ್ನ ಧೊರೆಯೆ ನಿನ್ನ ಮರೆಯ ಹೊಕ್ಕನೊ || ಮರೆಯದೆನ್ನ
ೂ ವ್ಯಾಘ್ರ) ಗಿರಿಯೊಳಿರುವ ಸಿರಿಯರಮಣ || ಅ || ಸಕಲಲೋಕಗಳನು
ಸೃಜಿಸುವಾತನು ಸುಖದಿಪ್ರಾಣಿಗಳನು ನೀನೆ ಸಲಹುವಾತನು | ಪ್ರಕಟ
ಜಗವನೀನೆ-ಪ್ರಳಯಗೈವನು| ನಿಖಿಲಜೀವಸಾಕ್ಷಿಯಾಗಿನಿತ್ಯನೀನೆನಿಯಮಿಸ್ಸ
| ಹರಿಯೆ ||೧|| ಸ್ಥೂಲಸೂಕ್ಷ್ಮರೂಪನೀನೆ ಮೂಲಪುರುಷನು|ಲೀಲೆಯನ್ನು
ಗೈವ ಕಾಲರೂಪನು || ನೀಲಲೋಹಿತಾದಿ ವಿಬುಧಜಾಲವಂದ್ಯನು ಪಾಲಿ

ತಾಖಿಲಾಂಡ ರಮಾಲೋಲ ಸುಗುಣಜಾಲ ಶ್ರೀ ॥ ೨ ॥ ಪರಮಪುರುಷ
ಜಾಕ್ಷ-ಪತಿತಪಾವನ | ಶರಧಿಶಯನ ಸಕಲಲೋಕ ಸಂವಿಭಾವನ | ವರಗುಣ
ವಿಗತಮಾಯುವಿಶ್ವಮೋಹನ॥ದುರಿತಗಜಮೃಗಾಧಿರಾಜವರದವಿಠಲವಿಹಗಯಾನ

81. ರಾಗಾ-ಭೈರವಿ-(-ಪೂರ್ವಿ)-ಆದಿ.

ಶ್ರೀ ವೆಂಕಟೇಶಪಾಹಿ-ತಾವಕಭಕ್ತಿಂದೇಹಿ ॥ ಪ ॥ ವಾರಿಜನೇತ್ರಾ-ವಾ
ಗಾತ್ರಾ – ನಾರದಸನ್ನುತಪಾತ್ರ, ನರಮಿತ್ರ ಸುಚರಿತ್ರ ॥ಶ್ರೀ॥ ೧ ॥ ಅಂ
ಯಾನ-ಕುಂಡಲಿಶಯನ ॥ ಖಂಡಪರಶು ಪರಿಪಾಲನ ಮುನಿಲಾಲನ ಸುರಖೇ
॥ಶ್ರೀ॥ ೨ ॥ ವೆಂಕಟರಮಣ-ಪಂಕಜ ಚರಣ ॥ ಸಂಕಟಮೋಚನಕಾರಣ |
ತಾರಣ ಗುಣಪೂರಣ ॥೩॥ ದಶರಥಬಾಲಾ-ದಶಮುಖಕಾಲ ॥ ದಶಶತಲೋ
ಪಾಲಾ-ಭೂಪಾಲಾ-ಸುರಮುನಿಲೋಲ ॥ ೪ ॥ ನಂದಕುಮಾರ-ನವನೀತಚೋರ
ಬೃಂದಾವನವಿಹಾರಾ-ಬಹುದಾರಾ-ಧುರಧೀರ ॥ ೫ ॥ ಅಜನುತಪಾದ-ಅಪ
ಖೇದ ॥ ಸುಜನಕಲುಷನಿರ್ಭೇದ | ನುತವೇದ | ಸುರಮೋದ ॥ ೬ ॥ ವರ
ಘ್ರಾಚಲವಿಹರಣಶೀಲ ॥ ವರದವಿಠಲ ಗೋಪಾಲ-ಶ್ರೀಲೋಲ-ಬಹುಲೀಲಾ ॥

82. ರಾಗಾ-ಜುಂಜೋಟಿ

ಶ್ರೀನಿವಾಸ ನಿನ್ನ ನಂಬಿದ ದಾಸನ | ಶ್ರೀವಾಸುಕಿಶಯು ಕಾಯೋಯ
ನು ॥ ಪ ॥ ರೂಪರಹಿತ ಬಹು | ರೂಪಧರಿಸಿಹ ಶ್ರೀಪತಿಯನ್ನನು ನೀಪರಿಪ
ಲಿಸು ॥ ೧ ॥ ಕಾಲರೂಪ ಬಹು-ಲೀಲೆಯತೋರುವ | ಮೂಲಪುರುಷಸುರ ಪಾಲ
ಶ್ರೀಹರಿ ॥ ೩ ॥ ಶಕ್ತಿಗಳನು ಅವ್ಯಕ್ತದೊಳಿರಿಸಿ ಸ | ಮಸ್ತವಸ್ತುವ ಸುವ್ಯಕ್ತಪ
ಸಿದ ॥ ೩ ॥ ಕಲ್ಪಕೋಟಿ ನಿನಗಲ್ಪಕಾಲಪರಿ ! ಕಲ್ಪಿತಸುರನರ ಕಲ್ಪಭೋಜಕ
॥ ೪ ॥ ಖಂಡಪರಶು ಅಖಂಡಲಾದಿಸುರ | ಮಂಡಲಸೇವಿತ ಪುಂಡರೀಕಪದ ॥೫
ಮಂಥರಧರಗೋವಿಂದ ಮುಕುಂದಸ | ನಂದನಾದಿ ಮುನಿಬೃಂದಸುವಂದಿತ॥ ೬
ಸಾರಸುಗುಣಪರಿ ವಾರಸಜ್ಜನಾ ಧಾರ ಧೀರವರದ ವಿಠಲಹರಿ ॥ ೭ ॥

83. ರಾಗಾ-ಬೇಹಾಗ್-ಖರಹರಪ್ರಿಯ.

ಬಾರೋಮನೆಗೆ ಭಾಗವತರ ಭಾಗದೇಯನೆ ॥ ಚಾರುವದನ ತಾಮರಸ
ತೋರು ಪ್ರೀಯನೆ ॥ ಪ ॥ ಹಗಲು ಯಿರಳು ನೆನಹು ಬಿಡದು ॥ ಸುಗುಣಸುಂದರ
ಬಗೆಯೊಳಿನ್ನ ಮರೆಯ ಬಹುದೆ | ನಿಗಮಗೋಚರ ॥ ೧ ॥ ಕಣ್ಣಿನಿಂದ ನಿನ್ನ ನೋ
ಧನ್ಯನಾಗುವೆ | ನಿನ್ನ ಚರಣಕೆನ್ನಶಿರದಿ ಮುನ್ನಬಾಗುವೆ ॥ ೨ ॥

ಪ್ತ ನಿನಗೆ ನಾನೇ ಭೃತ್ಯನಾಗುವೆ | ನೃತ್ಯಗೈದು ಪಾಡಿಕೃತಕೃತ್ಯನಾಗುವೆ ಶ್ರೀನಿವಾಸನಿನ್ನದಾಸನಾನೇನಲ್ಲವೆ | ಮಾನಪ್ರಾಣಗಳಿಗೆ ಧೊರೆಯು ಯಲ್ಲವೆ || ೪ || ಶರಣಜನರ ಭರಣಗೈವ ಕರುಣಿಯಾರೆಲಾ | ಹರಿಣಹರ ೊಳಿರುವವರದವಿಠಲಾ || ೫ ||

## 84. ರಾಗಾ—ಮೋಹನ.

ಮಾಮವದೇವ-ಮಹಾನುಭಾವ-ಶ್ರೀಮನೋಹರ ನಿರಾಮಯ ಚಿನ್ಮಯ | ರಮ್ಯಗುಣಧಾಮ ತಾವಕಂ || ಮಾ || ಪ || ಪಂಕಜನೇತ್ರ-ಪರಮ ) | ಶಂಖಚಕ್ರಧರ ಕಿಂಕರಾರ್ತಿಹರ | ಪಂಕಜಾಲಯಾಲಂಕೃತಗಾತ್ರ || | ೧ || ನೀಲಾಂಬುದಾಭ | ನೀರಜನಾಭ ಬಾಲ ಭಕ್ತಪರಿಪಾಲಹೇಮಮಯ | ನವ್ಯವನಮಾಲ ಸುಶೋಭ || ೨ ||ಕರುಣಾಲವಾಲ-ಖಳಕುಲಕಾಲ || ಹರಿಣ ಧರವರಶಿಖರಾಲಯ | ವರದವಿಠಲ ಸುಖ ಕರಕಮಲಾಲಯ || ಮಾ || ೩||

## 85. ರಾಗಾ.

ಭಜನೆಯ ಮಾಡಬಾರದೆ-ಭಕ್ತಿ ಮೀರದೆ|| ಭುಜಗಶಯನ ಗೋದ್ವಿಜಕುಲದೇ || ಅ || ಅಜಭವಮುಖಸುರ ವ್ರಜವಂದ್ಯನಪದ| ಭಜಕ ಸುಜನರಿಗೆ ನಿಜಸುಖ ನ || ೧ || ಪಂಕಜನೇತ್ರನ-ವರಮುಪವಿತ್ರನ, ಶಂಕರನುತನಿಷ್ಕಲಂಕನ | ಭಜನೆ || ಚರಣವ ನಂಬಿದ ಶರಣರ ಪೊರೆಯುವ| ವರದವಿಠಲ ಧೊರೆ ವರದನ

## 86. ರಾಗ—ಬೇಹಾಗ್.

ಶ್ರೀನಿವಾಸ ಸಲಹೋ ನಮ್ಮ ಶ್ರೀನಿಧಾನ ಚರಣನೆ | ಧ್ಯಾನ ನಿರತಮೌನಿ ರ ಮಾನಸಾಬ್ಜಹಂಸನೆ || ಅ || ನಕ್ರಮುಖದಿ ಸಿಕ್ಕಿದಿಭನನಕ್ಕರಿಂದ ಪೊರೆದನೆ | ಧರ ತ್ರಿವಿಕ್ರಮಾದಿ ಚಕ್ರಭೋಗಿಶಯನನೆ || ೧ || ಬಿಟ್ಟ ನಿನ್ನ ಭ್ರಷ್ಟನಾಗಿ ಜನ್ಮ ಜನ್ಮದೆ || ಹುಟ್ಟಿ ಹುಟ್ಟಿ ಕಷ್ಟಪಟ್ಟೆಕೃಷ್ಣ ನಿನ್ನ ನಂಬಿದೆ || ೨ || ಶರಣ ರ ಪೊರೆವನೆಂಬ ಬಿರುದು ಧರಿಸನಲ್ಲೆಲಾ | ಹರಿಣ ಹರಣಧರದೊಳಿರುವ ಕರುಣಿ ದ ವಿಠಲ || ೩ ||

## 87. ರಾಗಾ.

ಮಂದರಧರಗೋವಿಂದ ಮುಕುಂದ ಸನಂದ ವಂದ್ಯನೆ ಲಾಲಿಸೋ|ಕುಂದರದನ ಇಂದುವದನ ಮುಚುಕುಂದವರದನೆ ಪಾಲಿಸೋ || ಪ || ಸಾರಸಭವನುತ ಸಾರ ತ ಸಂಸಾರಪಯೋನಿಧಿ ಪಾರದನೆ||ವಾರಿಧಿಮದಹರ ವಾರಿಧಿನಿಭಶಾರೀರವಿಹಾರ

ವಿಶಾರದನೆ || ೧ || ಶ್ರೀಶನಿಖಿಲಲೋಕೇಶಜನಕಭವಪಾಶವಿಮೋಚನ ಪಟುಚರಿ
ಈಶವಿನುತ ಸರ್ವೇಶಪರಾತ್ಪರ | ಕೇಶವಸದ್ಗುಣಗಣಭರಿತ || ೩ || ಧರೆಯೊಳು
ಪುಲಿಗಿರಿಯೊಳು ನೆಲಸಿಹ, ಶರಣರ ಸಲಹುವ ಶ್ರೀಧರನೆ || ವರದ ವಿಠಲ ಸುಖಕ
ಕುಶಲ ಕರಿವರದ ಚಕ್ರಧರ ವರನೆ || ೩ ||

88. ರಾಗಾ-ಜುಂಜೋಟಿ.

ಬಾರೋ ಬಾರೋ ಭವನುತ ಚರಣನೆ | ಸಾರಸುಗುಣ ಪರಿಪೂರಿತ ಕ
ಣನೆ || ಪ || ಚರಣ ಕಮಲಗಳಿಗೆರಗುವೆ ಭಕ್ತಿಯಲಿ | ಭರದಲಿ ಯನ್ನನು ಪ
ಯಲು ಮುದದಲ್ಲಿ || ೧ || ಅರಿದರ (?) ವರಗಳ-ಕರದಲಿ ಪಿಡಿಯುತ | ಕರಿಯ
ಪೊರೆಯುವ ತ್ವರೆಯಲಿ ಬಹುವೋಲ್ || ೨ || ಪರಮಪುರುಷಫಣಿಗಿರಿಶಿಖರಾಲಯ
ವರದವಿಠಲಸುಖಕರಕಮಲಾಲಯ || ೩ ||

89. ರಾಗ—ಕಾಂಬೋದಿ—ಆದಿತಾಳ.

ಕರುಣದಿಕಾಯೋ - ಕರುಣಾಲವಾಲ || ಪ || ಶಿರಿಯರಸನೆ ನಿನ್ನ | ಚರಣ
ನಂಬಿದೆ | ಸುರಗಣಸೇವಿತ ಸುರರಾಜ ಪಾಲ ||ಅ|| ಇಂದ್ರನ ಕೂಡಿ ಮುನೀಂದ್ರ
ಸತಿಶಾಪ | ದಿಂದರೆಯಾಗಿರಲಂದು ನೀದಯದಿ || ಸುಂದರ ಚರಣಾರವಿಂದಗಳ
ಧೂಳಿಯಿಂದ ಪಾವನಗೈದ ಇಂದಿರೇಶನೆ ನೀ || ಕರು || ನಕ್ರನಮುಖದಲ್ಲಿ ಸಿಕ್ಕಿ
ಕರಿಕುಲ ಚಕ್ರವರ್ತಿಯು ಮರೆಹೊಕ್ಕರೆ ನುತಿಸಿ||ಚಕ್ರದಿ ಮಕರಿಯ ನಿಕ್ಕಿ ಗಜೇ
ದ್ರನ | ರಕ್ಷಿಸಿದಾಪರಿಯಕ್ಕರೆ ತೋರಿಸಿ ||೨|| ತರಣಿತನಯಫಣಿ ವರಶರವನು ಸ
ವರ ಶಿರಸರಿಸಕ್ಕೆ ಗುರಿಯಿಡಲು || ಚರಣದುಂಗುಟದಿಂದ ಧರಣಿಯನೂರಿನರನ-ಶಿರ
ಳುಹಿದ ಶಿರಿವರದ ವಿಠಲ ಹರಿ ||೩||

90. ರಾಗಾ-ಜಾವಡಿ.

ಶೌರಿನಂದನ ಪರಿವಾರ ಟಂದನ-ಸರಿಯಾರೋ ಹರಿ ನಿನಗೆ || ಪ || ನಿನ
ಸರಿಯಾರೋ | ಶ್ರೀಧರನೆ || ಅ || ನೋಟವಾತ್ರದಿ ಜಗತ್ ಕೋಟಿ ನಿರ್ಮಿಸಿಪ
ಪಾಟಿಯಿಲ್ಲದ ಸೂತ್ರ ನಾಟಕಧಾರಿ || ಸರಿ || ೧ || ಬಗೆ ಬಗೆ ರತಿಯಲಿ ಜವನ
ಮೋಹಿಪ | ನಿಗಮಾಂತ ಗೋಚರ ನಗಧರ ಹರಿ-ಸರಿಯಾರೋ || ೨ || ಸುರವರ
ಜೆಯು - ನರಕೆ ಮಾಡದೆ ಬಂದ | ಶಿರಿಯ ಮೋಹಿಸುತಿರ್ಪ ವರದವಿಠಲ ||ಸರಿ|| ೩

91. ರಾಗಾ-ಆರಭಿ-ಆದಿತಾಳ.

ಸಾರಸದಳನಯನೆ - ಸಲಹಮ್ಮನು ತೋರುವ ಜಗದಯನೆ || ಪ || ಕ್ಷೀ
ಶರಧಿ ಸುಕುಮಾರಿಣಿ ಹರಿಸಹ | ಟಾರಿಣಿ ಭುವನ ವಿದಾರಿಣಿ ರುಕ್ಮಿಣಿ || ಅ

ಂದಹಾಸ ವಿಜಿತೇಂದು ಕಿರಣೆ | ಗಜ ಮಂದಗಮನೆ ಸಂಕ್ರಂದನ ವಂದಿತೆ ||೧||
ರಜಸಮಪಾಣಿ | ನೀಲಾಲಿಸು | ಕೀರಮಧುರವಾಣಿ || ತಾರಹಾರಶೃಂಗಾರತ
ಗಿಣಿ - ಮಾರಜನನಿಕಂಸಾರಿಯರಾಣಿ || ೨ || ನೀಲಭುಜಗವೇಣಿ - ನೀನೇಗತಿ
ಲಿಸುಕಲ್ಯಾಣಿ || ಲೀಲೆಯಿಂದ ವನ ಮಾಲಿಯುರದಿ ನಿತ್ಯಾಲಯಗೈದಿಹ ಬಾಲೆ
ದನುತೆ || ೩ ||

## 92. ರಾಗ—ಭೈರವಿ—ಆದಿ,

ನಂಬಿದೆ ನಿನ್ನ ಪಾದಾಂಬುಜಯುಗಳವ - ಶಂಬರಾರಿಜನನಿ ||ಪ|| ಬೆಂಬಿಡ
ಹೃದಂಬುಜದೊಳಗವಲಂಬಿಸಿಸಲಹುಮದಂಬೆ ಸನಾತನಿ || ಅ ||ಅಂಬುಜಮುಖಿ
ಚಿಕುರೆ ಶರ ದಂಬುಜದಳನಯನೆ || ಕಂಬುಕಂಠಿಕನಕಾಂಬರೆ ಮದಕರಿ, ಕುಂಭ
ೂೀಧರೆ, ಬಿಂಬಫಲಾಧರೆ || ೧ || ಕರ್ಣದೊಳಿಸೆವಸು ವರ್ಣವಿಡಿದ ಪೊಸ -
ದೊಡವೆಗಳ || ಮನ್ನಿಸುವಂತಿದೆ ಪೂರ್ಣಕಟಾಕ್ಷವು | ಕನ್ನಡಿಕದಪಿನ ರನ್ನೆ
ರ್ಣವೆ || ೨ || ಮಾಲತಿಮಲ್ಲಿಗೆ ಮಾಲಯಿಂದೊಪ್ಪುವ| ನೀಲಭುಜಗವೇಣಿ ||
ಲೆಯಿಂದ ಶಾರ್ದೂಲ ಮಹೀಂದ್ರದೊಳಾಲಯ ಗೈದಲಮೇಲಮಂಗಾಮಣಿ||೩||

## 93. ಜಾವಡಿ.

ಪಾಲಿಸೆನ್ನ ಶ್ರೀಲೋಲ ಕೃಪಾಳೋ|| ಬಾಲಕನು ಕ್ರಿಯು ಲಾಲಿಸಿಕೇಳೋ||ಪ||
ರಾಗಾರ ಶರೀರದಯುಗಳ - ದಾರಾಪತ್ಯದ ದಾರಿಯನಿಗಳ || ೧ || ಆರುಮಂದಿ
ು ಶೂರರು ಖಳರು | ಚೋರರು ಚಿತ್ತವಹಾರಿಸುತಿಹರು || ೨ || ತನುಸಂಬಂ
ಜನರರ್ಥಿಯಲಿ | ಕೊಸೆವರು ದುರ್ಮ್ಯಗವನು ಪೋಲುತಲಿ || ೩ || ತಾಪತ್ರಯ
ತಾಪದಬೇಗೆ | ಈಪರಿಮೋಚನ ಶ್ರೀಪತಿಹೇಗೆ || ೪ || ಕರುಣದಿಶ್ರೀಪುಲಿ ಗಿರಿ
ಳಿರುವನೆ | ಶರಣರ ಪೊರೆಯುವ | ವರದವಿಠಲನೆ ||

## 94. ರಾಗ—ಕೇತಾರಗೌಳ

ತನುವೆನ್ನದು ಚೇತನವೆನ್ನದು - ಎಂದು - ಅನುದಿನ ಪೋಷಣೆಯನುಮಾ
ಹರಿ || ಪ || ಚಿನುಮಯ ನಿನ್ನನು - ನೆನೆವೆನೆಂದರೆಮನ - ತನುಮಧ್ಯೆಯರತನು
ೂಳಿರುತಿಹುದು| ಅನಘನಿನ್ನನು ನೋಡುವೆನಾನೆನ್ನಲು ದೃಷ್ಟಿ| ಕನಕಾಂಗಿಯರ
ಭಸ್ತನದಮೇಲಿಹುದಯ್ಯ || ೧ || ಚರಣದ ಪೂಜೆಯೊಳಿರುವೆನೆಂದರೆಕರ
ಡು ಕೋಮಲೆಯರ ನರಸುವುವು | ಹರಿಕಥಾಶ್ರವಣದೊಳಿರದೆ ಈ ಕಿವಿಗಳು |

ಹರಿಣಾಕ್ಷಿಯರಕಂಠ ಸ್ವರಕೆ ಮೋಹಿಪವಯ್ಯ ॥ ೨ ॥ ದುರಿತದೂರನ ನಾ
ಸ್ಮರಿಸದು ನಾಲಿಗೆ, ಸರಸಿಜಾಕ್ಷಿಯರೊಳು ಸರಸೋಕ್ತಿಪಡೆದು ॥ ಚರಣಶ್ರೀ ತು
ಸಿಯ ನರಿಯದೆ ನಾಸಿಕ, ತರುಣಿಯ ವೈಗಂಪನರಸಿ ಹಿಗ್ಗುವದಯ್ಯ ॥ ೩
ನಿನ್ನಂಘ್ರಿಗೆರಗದೆ ಕುನ್ನಿಶರೀರವಿದುನ್ನತಸ್ತನವುಳ್ಳ ಕನ್ನೆಯರೋಳ್ ॥ ತ
ಸುರತಸುಖವನ್ನೆ ಚಿಂತಿಸುವದು | ಯನ್ನಾಧೀನದೊಳಿಲ್ಲ ನೀನೇ ಬಲ್ಲಿ ॥ ೪
ಎರವಿನ ಸಿರಿಯಂತೆ ಕರಣಕಳೇವರ ಬರಿದೆನನ್ನದುಎಂದು ಮೆರೆದೆ ನಾನು ॥ ಹ
ನಿನ್ನದೇ ಸರಿ ದುರಿತಸುಕೃತಕೆನ್ನ ಗುರಿಮಾಡದೆಕಾಯೋ ವರದ ವಿಠಲ ಕೃಷ್ಣ॥೫

## 95. ರಾಗ—ಅಠಾಣ.

ಶ್ರೀವೆಂಕಟೇಶಮಾಂ ಪಾಲಯ, ಸುಗುಣಾಲಯ ॥ ಪ ॥ ದೇವದೇವಶಿಖ
ಮಣಿ | ಸೇವಕಸುಚಿಂತಾಮಣಿ ॥ ಅ ॥ ಕಮಲಲೋಚನ ಭಕ್ತ ಶಮಲ (
ಲೋಚನಶಕ್ತ ॥ ವಿಮಲ ಚರಿತಪೂರ - ಕಮನೀಯಶರೀರ ॥೨॥ ಧೀರ ದಶರ
ಕುಮಾರಾ ಬುಧಜನವಿಹಾರ | ವೀರಹರಿ ಪರಿವಾರ ಕ್ರೂರಾಸುರವಿದಾರ ॥ ೨
ಸರಸಿಜಾಸನನುತ ಸುರಮುನಿಸೇವಿತ, | ಹರಿಣಾರಿಧರಾಗಾರ ವರದ ವಿಠಲ
ಕಾರ ॥ ೩ ॥

## 96. ರಾಗ—ಸಾಕೀ.

ಶ್ರೀಕರ ಮಾಗಿಪ ಗೋಕುಲದಲಿಕರು ಣಾಕರ ಕೃಷ್ಣನು ನೆಲಸಿರಲು
ನಾಕದಸಿರಿಯ ನಿರಾಕರಿಸುವ ಸಿರಿತಾಪರ್ಷದೊಳು ॥ ೧ ॥ ರಾವಣನನುಜೆಯ
ರಾಘವ ದೇವನ ಲಾವಣ್ಯಕೆ ಮೋಹಿಸಿ ಮನದಿ ॥ ಭಾವಜನಸ್ತ್ರದ ಬಾಧೆಯಿಂ
ಪತಿ ಭಾವದಿ ನೋಡುತ ಭರವಿ ॥೨॥ ಕಾಮಿಸಿಕಾಡಲು ಕಾಕುತ್ಸ್ಥನುಬಲ ರಾ
ಸುಜನವತಾರದಲಿ ॥ ಕಾಮಿತವಹ ದಿನೆ ಕಾಮಿನಿರಾಧಾ ನಾಮದಿ ಜನಿ
ಗೋಕುಲದಿ ॥ ೩ ॥ ಒಂದಾನೊಂದಿನ ನಂದಾದಿಗಳಾ ನಂದಾನ್ವಿತಮತಿ ವೃ
ಯುಲಿ ॥ ಒಂದಾಗಿ ಧರಾ ವೃಂದಾರಕರನು ವಿಂದಾರಾಧಿಪ ಭಕ್ತಿಯಲಿ ॥ ೪
ಬಂದರುವರಕಾಳಿಂದಿಯತೀರದಿ ನಂದನದಂತಿಹ ವನದೆಡೆಗೆ ॥ ಬಂಧುಗಳೊಂದಿ
ಭಂಡಿಯನೇರಿ ಮುಕುಂದನ ಧ್ಯಾನಿಸುತಡಿಗಡಿಗೆ ॥ ೫ ॥ ಅಲ್ಲಿಗೆ ಭೂಸುರ
ಬರಲು ಮಿತಿಯಿಲ್ಲದೆ ಗೋಧನ ದಾನದಲಿ ॥ ಬಲ್ಲಿದ ಭೋಜನದಲ್ಲಿ ದಣಿಸಿಸುಖ
ರುತಿರಲಾಸಮಯದಲಿ ॥ ೬ ॥ ಅಸ್ತ್ರಮಹೀಧರ ಮಸ್ತಕವನು ಸುಜನಸ್ತುತದಿನ

ರಲು | ನಿಸ್ತುಲತಮದಿ ಸಮಸ್ತರ ದೃಷ್ಟಿಗಳಸ್ತಗೊಳಿಸೆಜನಭಯಗೊಳಲು
|| ನಂದನು ತನ್ನಯ ನಂನನನಂಬುವನೆಂದು ರಾಧೆಯತಾ ನೋಡಿ ||
ನ ನೀನೇ ಮಂದಿರಕ್ಕೈದಿಸು | ಎಂದರೆ ಒಂದಳು ನಗೆಗೂಡಿ || ೮ || ಕಂದ
ೋ ಗೋವಿಂದಬಾ ಯದುನಂಗನಬಾ ಕಮಲಾಸನನ || ತಂದೆಬಾರೋನಿಜ
ದಿರದೊಳಗಾ ನಂದವತೋರುವೆ ಶಶಿವದನಾ || ೯ || ಆಡಿಸುವೆನುನೀನಾಡು
ಟಗಳ ನೋಡಿಸುವೆನು ನೀನೊಲಿದುದನು | ಬೇಡಿದುದೆಲ್ಲವ ನೀಡುವೆಸಂಶಯ
ನಿನ್ನನೆ ಕೂಡಿಹೆನು || ೧೦ || ರಾಧೆಯನುಡಿಗಳ ನಾದರಿಸುತ ಮಧುಸೂದನ
ಯು ಮನದೊಳಗೆ || ಮೋದಪಡಿಸಲನುವಾದನುಭಕ್ತಾ ಮೋದಚರಿತ್ರನು
ುನಿಗೆ || ೧೧ || ಮುತ್ತನಿತ್ತು ಬಲು ಮುದ್ದಿಸಿ ಬಾಲಕ ನೆತ್ತಿಕೊಂಡು ಬಲು
ರದಿ| ವೃತ್ತಕುಚಗಳಿಂದೊತ್ತಿಮನೋಭವ ನರ್ಥಿಗೆ ಸೊಕ್ಕುವ ಕಾತರದಿ||೧೨||
ಪುಲಿಗಿರಿದೊರೆ ವರದವಿಠಲನು ಕರುಣನಾದೊಡೀಗಳೇ ಬೆರೆದು || ಸ್ಮರಶರದಾ
ನು ಪರಿಹರಿಸುವೆನೆಂಧರುಷದಿ ಬರುತಿರ್ದಳು ನಲಿದು || ೧೩ ||

## 97. ರಾಗ—ಮಧ್ಯಮಾವತಿ.

ಪೀತಾಂಬರಧರ ನಮೋ ನಮೋ ವನ | ಜಾತಾಂಬಕತೇ ನಮೋ ನಮೋ
|| ಖ್ಯಾತಚರಿತ್ರವಿ ಧಾತೃಜನಕ ಪುರು ಹೂತಸಹೋದರ ನಮೋ ನಮೋ||ಅ||
ತರಹಿತ ಜಲಜಾತಭವಾರ್ಚಿತ ಪಾಥೋನಿಧಿಶಯ ನಮೋ ನಮೋ || ಪೀತದ
(?) ಭವಭೀತಿಧರಾನತ (?) ಶ್ರೀತರುಣೀಪ್ರಿಯ ನಮೋ ನಮೋ || ೧ ||
ನುಳ ನೀರದ ಕೋಮಳ ದೇಹನಿ ರಾಮಯ ನಿರ್ಮಲ ನಮೋ ನಮೋ|| ಕಾವ್ಯ
ಕ ಬಲರಾಮ ಸಹಜ ಸಂಗ್ರಾಮ ಮುಜ್ವಲ ನಮೋ ನಮೋ || ೨ || ನಂದ
ೀಪ ವರನಂದನ ಲಲನಾನಂದನ ಸುಂದರ ನಮೋ ನಮೋ || ಕುಂದರದನಶರ
ದುವದನ ಗೋವಿಂದಜನಾರ್ದನ ನಮೋ ನಮೋ || ೩ || ಹಂಸಡಿಂಬಕ ಬಕ
ಸಪ್ರಮುಖನೃ ಶಂಸವಿಹಿಂಸಕ ನಮೋ ನಮೋ || ಸಂಸರದಘವಿಧ್ವಂಸಕ ಪರ
ಹಂಸೋತ್ತಂಸಕ ನಮೋ ನಮೋ || ೪ || ಶರಣಜನಾವನ ಶಶಿಕುಲಪಾವನ
ುಡಗಮನತೇ ನಮೋ ನಮೋ || ತರುಗಣಸಂಕುಲ ವರವ್ಯಾಘ್ರಾಚಲವರದ
ಲತೇ ನಮೋ ನಮೋ || ೫ ||

## 98. ರಾಗ.

ಹರಿ ನೀಲ ಸದೃಶ ನೀಲಕನಕಚೇಲ ಲೀಲಯಾ | ಪುಲಿಶೈಲರಚಿತಲೀಲರಮಾ
ೀಲಪಾಲಯಾ || ಪ || ಶರದಿಂದುವದನ – ಕುಂದರದನ ನಂದನಂದನಾ | ಅರ

